


# ಮಹಾಮನೆ

ಕನ್ನಡ ಮಾಸಿಕ ಪತ್ರಿಕೆ

ಸಂಪುಟ : ೨೩
ಸಂಚಿಕೆ : ೦೧
ಆಗಸ್ಟ್ : ೨೦೨೦
ರೂ. ೧೫/-



# ಮಹಾಮನೆ


ಆಗಸ್ಟ್ ೨೦೨೦ ಸಂಪುಟ : ೨೩ ಸಂಚಿಕೆ : ೦೧





ಪ್ರಕಾಶಕರು
**ಡಾ. ಗೊ.ರು. ಚನ್ನಬಸಪ್ಪ**
**ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು**
**ಮೈಸೂರು**



**ಆಡಳಿತ ಕಾರ್ಯಾಲಯ**
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ
೧ನೆಯ ಮುಖ್ಯರಸ್ತೆ,
ಜಯನಗರ ೮ನೆಯ ವಿಭಾಗ,
ಬೆಂಗಳೂರು - ೫೬೦ ೦೭೦
ದೂ: ೦೮೦ - ೨೨೯೭ ೦೧೨೫

**E-mail:**
mahamanemagazine@gmail.com
abssp.reg@gmail.com


ಸಂಚಿಕೆಯ ಅಂತರಂಗ

## ಬಿನ್ನಹ

# ಕೊಟ್ಟ ಕುದುರೆಯನೇರಲರಿಯದ

ಮಹಾಮನೆಯ ಹೊಣೆಗಾರಿಕೆ ಮತ್ತೆ ಹೆಗಲಿಗೆ ಬಂದಿದೆ. ಶರಣರು, ಶರಣ ಚಳುವಳಿಗಳನ್ನು ಕುರಿತು ಮಾಡುವ ಯಾವ ಕೆಲಸವೂ ಪ್ರಿಯವೇ, ಅನ್ಯಕಾರ್ಯಭಾರದ ಒತ್ತಡವಿಲ್ಲದಿದ್ದರೆ. ಸ್ವಾಮೀಜಿಯವರ ಒತ್ತಾಸೆಯಂತೆ ಇದನ್ನು ಒಪ್ಪಿದ್ದೇನೆ. ಇಷ್ಟಕ್ಕೂ ಪತ್ರಿಕೆಯೊಂದರ ಸಂಪಾದಕತ್ವವೆನ್ನುವುದು 'ಸಂಘಕಾರ್ಯ'ವೂ ಹೌದು. ಆ ಧೈರ್ಯ ಮತ್ತು ನಂಬಿಕೆ ಎರಡೂ 'ಮಹಾಮನೆ'ಯ ವಿಷಯದಲ್ಲಿ ನನಗಿದೆ.

ತಲ್ಲಣ ಎನ್ನುವ ಅನುಭವ ಅದರೆಲ್ಲಾ ಸ್ವರೂಪಗಳಲ್ಲಿ ನಮ್ಮ ಅನುಭವಕ್ಕೆ ಬರುತ್ತಿರುವ ಕಾಲವಿದು. ಕೊರೋನಾ ಎನ್ನುವ ವೈರಸ್ ಮನುಕುಲದ ಪರಮಶತ್ರುವಿನಂತೆ ಕಾಣುತ್ತಿದೆ. ಶತ್ರುಗಳಿಂದಲೂ ಕಲಿಯಬೇಕಾದ ಪಾಠಗಳು ಎಂದಿಗೂ ಇರುತ್ತವೆ. ಆಧುನಿಕತೆ ಮತ್ತು ತಂತ್ರಜ್ಞಾನ ಮನುಷ್ಯರಿಗೆ ಅನೇಕ ಬಗೆಯ ಗೆಲುವುಗಳನ್ನು ಮತ್ತು ಮುನ್ನಡೆಗಳನ್ನು ಕೊಟ್ಟಿದೆ ಎನ್ನುವುದು ಭ್ರಮೆ, ಮರೀಚಿಕೆ ಎನ್ನುವುದು ಮತ್ತೊಮ್ಮೆ ಸಂದೇಹಾತೀತವಾಗಿ ಸಾಬೀತಾಗಿದೆ.

ಶತಮಾನಗಳ ಹಿಂದೆ ಪ್ಲೇಗ್, ಕಾಲರಾದಂತಹ ಸಾಂಕ್ರಾಮಿಕ ರೋಗಗಳಿಗೆ ಬಲಿಯಾಗುತ್ತಿದ್ದವರ ಸಂಖ್ಯೆ ಮತ್ತು ಅಸಹಾಯಕತೆಗೆ ಹೋಲಿಸಿದರೆ ನಮ್ಮ ಅಸಹಾಯಕತೆ ಇನ್ನೂ ಭೀಕರವಾಗಿದೆಯೆಂದೇ ಅನ್ನಿಸುತ್ತದೆ. ಯಾವ ವೈಜ್ಞಾನಿಕ ಸಂಶೋಧನೆಯೂ ಈ ವೈರಸ್ ಅನ್ನು ನಿರ್ನಾಮ ಮಾಡಲು ಸಾಧ್ಯವಾಗಿಲ್ಲ. ವಂಶವಾಹಿನಿಯಲ್ಲೇ ಖಾಯಿಲೆಗಳು ಬರಬಹುದಾದ ಸಾಧ್ಯತೆಯನ್ನು ಕಂಡುಕೊಂಡು ಅವುಗಳಿಗೆ ಚಿಕಿತ್ಸೆ ಪಡೆದುಕೊಳ್ಳುವ ಮುನ್ನಡೆ ನಮ್ಮದು ಎನ್ನುವ ಅಹಂಕಾರವೀಗ ನುಚ್ಚುನೂರಾಗಿದೆ. ಮಂಗಳನ ಅಂಗಳಕ್ಕೆ ಕಾಲಿಟ್ಟು ಬೀಗುತ್ತಿದ್ದ ನಾವು ನಮ್ಮದೇ ಮನೆಯಂಗಳಕ್ಕೂ ಕಾಲಿಡಲಾಗದೆ ಪರಿತಪಿಸುತ್ತಿದ್ದೇವೆ. ಕೊರೋನಾದ ಎಲ್ಲ ದುರಂತಗಳನ್ನು ಒಪ್ಪಿಕೊಂಡೂ, ಅದಕ್ಕೆ ಮರುಗುತ್ತಲೇ ನಾವೆಲ್ಲರೂ ತಪ್ಪೊಪ್ಪಿಗೆಯ ಭಾವದಲ್ಲಿ ಒಪ್ಪಿಕೊಳ್ಳಬೇಕಾದ ಕೆಲವು ಸಂಗತಿಗಳಿವೆ, ಅದನ್ನು ಎಲ್ಲರೂ ಬಲ್ಲರು.

ಮಾನವಕುಲವು ತನಗೆ ತಾನೇ ಧರಿಸಿಕೊಂಡಿರುವ ಮೇಲರಿಮೆಯ, ಅಹಂಕಾರದ, ದುರಾಸೆಯ ಕಿರೀಟವನ್ನು ಕಳಚಿಡಲು ಇದು ತಕ್ಕ ಸಮಯ. ಜಗತ್ತು ತನಗಾಗಿ ಇದೆ ಎನ್ನುವ ಕೇಂದ್ರೀಕೃತ ಭಾವದಿಂದ ತಾನು ಜಗತ್ತಿನ ಒಂದು ಅಣು ಎನ್ನುವ ಸತ್ಯವನ್ನು ಮಿತಾಂತವಾಗಿ ಒಪ್ಪಿಕೊಳ್ಳುವುದೇ ಮನುಕುಲವನ್ನು ಉಳಿಸಿಕೊಳ್ಳಬಹುದಾದ ಏಕೈಕ ದಾರಿಯಾಗಿದೆ. ಪ್ರಕೃತಿಯೊಂದಿಗಿನ ಸಹಬಾಳ್ವೆಯು ಆಧುನಿಕ ಜಗತ್ತಿನ ಅನೇಕ ವಿಕಾರಗಳಿಗೆ ನಿಶ್ಚಿತವಾದ ಮದ್ದು.

ಶರಣರು ಪ್ರಕೃತಿಯೊಂದಿಗಿನ ಸಹಬಾಳ್ವೆಯನ್ನು ಪ್ರೀತಿ ಮತ್ತು ಘನತೆಯಲ್ಲಿ ಸಾಧಿಸಿಕೊಳ್ಳಬೇಕಾದ ಪ್ರಾಕೃತಿಕ ದಾರಿಯ ಹರಿಕಾರರು. ಶರಣರು ಮತ್ತೆ ಮತ್ತೆ ಹೇಳುವ ಒಂದು ಸಂಗತಿಯೆಂದರೆ ಮನುಷ್ಯನ ಅಹಂಕಾರಕ್ಕೆ ಕಾರಣವಿಲ್ಲ ಎನ್ನುವುದು. ಇದನ್ನು ಅವರು ಕೇವಲ ಅನುಭಾವದ ನೆಲೆಯಲ್ಲಿ ಪ್ರತಿಪಾದಿಸಲಿಲ್ಲ. ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಮತ್ತು ಆರ್ಥಿಕವಾಗಿಯೂ ಈ ಸಂಗತಿಗಳನ್ನು ಸಾಧಿಸಿಕೊಳ್ಳಲು ಹವಣಿಸಿದರು. ಸರ್ವರಿಗೆ ಸಮಪಾಲು ಎನ್ನುವ ಕುವೆಂಪು ಅವರ ಮಾತು ನೆನಪಾಗುತ್ತಿದೆ. ಎಂದರೆ ಕೊನೆಗೂ ನಮ್ಮ ಬದುಕಿನ ದ್ರವ್ಯಗಳಾಗಬೇಕಾಗಿರುವುದು ವಿನಯ, ಪ್ರೀತಿ ಮತ್ತು ಸಹಬಾಳ್ವೆ. ಇಲ್ಲಿ ಸಹಬಾಳ್ವೆ ಎನ್ನುವಾಗ ಸಹಿಷ್ಣುತೆಯೇ ನಮ್ಮ ಗುರಿಯಾಗಬೇಕು.



'ಭಿನ್ನವಿದ್ದೂ ಬೆರೆಯಬಹುದು' ಎನ್ನುವುದನ್ನು ನಮ್ಮ ದೃಷ್ಟಿಕೋನವಾಗಿಸಿಕೊಳ್ಳುವ ಅಗತ್ಯ ಹಿಂದೆಂದಿಗಿಂತಲೂ ಇಂದು ಹೆಚ್ಚಾಗಿದೆ. ಧರ್ಮ, ವರ್ಗ, ಜಾತಿಗಳ ಲೆಕ್ಕವಿಲ್ಲದೆ ಸಾಂಕ್ರಾಮಿಕ ರೋಗ ಲೋಕವನ್ನು ಆವರಿಸಿರುವಾಗ ಅದನ್ನೂ ಕೋಮುವಾದಿ ನೆಲೆಯಲ್ಲಿ ವಿಶ್ಲೇಷಿಸುವುದು ಅತ್ಯಂತ ಅಪಾಯಕಾರಿ. ಸಾಂಕ್ರಾಮಿಕ ರೋಗವನ್ನು ಮನೋಸ್ಥೈರ್ಯದಿಂದ ಹೆದರಿಸಬೇಕು ಎನ್ನುವುದು ನಿಜ. ಆದರೆ, ಅದೇ ಹೊತ್ತಿನಲ್ಲಿ ಅದನ್ನು ಮಾನವ ವಿವೇಕದಲ್ಲೂ ಎದುರಿಸಬೇಕು ಎನ್ನುವುದು ಈ ಸಂದರ್ಭದ ಮೂಲಪಾಠಗಳಲ್ಲಿ ಒಂದು. ಮನೋಸ್ಥೈರ್ಯದ ಮಾತು ಬಂತು, ಶ್ರೀನಿವಾಸ ವೈದ್ಯರ ಹಳ್ಳ ಬಂತು ಹಳ್ಳ ಕಾದಂಬರಿಯಲ್ಲಿ ಪ್ಲೇಗ್ ಆರಂಭವಾದಾಗ ಆ ಹಳ್ಳಿಯ ಜನ ಅದಕ್ಕೆ ಪ್ರತಿಕ್ರಯಿಸುವ ಬಗೆ ಹೀಗಿದೆ. 'ಅಯ್ಯಾ ಮತ್ತೆ ಬಂತೇನು, ಇದೇನು ದಸರೆ, ದೀಪಾವಳಿಗತೆ ಪ್ರತಿವರ್ಷ ಬರಲಿಕ್ಕೆ ಹಿಡಿತಲ್ಲ'. ಈ ಮಾತಿನ ಹಿಂದೆ ಆ ಹಳ್ಳಿಗರ ಮುಗ್ಧತೆ, ಅಜ್ಞಾನವೂ ಇದೆ. ಆದರೆ ಈ ಎರಡರ ಜೊತೆಯಲ್ಲೇ ಅವರ ಮನೋಸ್ಥೈರ್ಯವೂ ಎದ್ದು ಕಾಣುತ್ತದೆ. ಬದುಕಿನ ಎಂಥದೇ ಕಷ್ಟದ ಘಳಿಗೆಗಳನ್ನು ಸಂತಸ ಘಳಿಗೆಗಳಂತೆಯೇ ಎದುರಾಗದೆ, ಬೇರೆ ದಾರಿಯಿಲ್ಲ ಎನ್ನುವ ಸತ್ಯವನ್ನು ಅವರು ಒಪ್ಪಿಕೊಂಡಿದ್ದರು ಎನ್ನುವುದೂ ಇಲ್ಲಿ ಮುಖ್ಯವಾಗಿ ಕಾಣುತ್ತದೆ. ಕನ್ನಡ ಸಾಹಿತ್ಯದುದ್ದಕ್ಕೂ ಸಾಂಕ್ರಾಮಿಕ ರೋಗಗಳನ್ನು ವಸ್ತುವಾಗಿಸಿಕೊಂಡ ಅನೇಕ ಕೃತಿಗಳಿವೆ. ಇವುಗಳ ಓದು ಕೂಡ ಈ ಸಂದರ್ಭದಲ್ಲಿ ಅಷ್ಟೇ ಮುಖ್ಯ. ರಾವ ಬಹದ್ದೂರರ ಗಾಮಾಯಣ, ಅನಂತಮೂರ್ತಿಯವರ ಸಂಸ್ಕಾರ, ವೈದ್ಯರ ಹಳ್ಳ ಬಂತು ಹಳ್ಳ, ಕೃಷ್ಣ ಆಲನಹಳ್ಳಿಯವರ ಭುಜಂಗಯ್ಯನ ದಶಾವತಾರ ಮೊದಲಾದವುಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ದಾಸ್ಯದ ಜೀವಕ್ಕಿಂತ ಸ್ವಾತಂತ್ರ್ಯದ ಸಾವು ಮೇಲು ಎನ್ನುವುದು ಎಲ್ಲ ಕಾಲದ ಮನುಷ್ಯರ ಹಂಬಲ. ಸ್ವಾತಂತ್ರ್ಯ ಎನ್ನುವುದೇ ನಾಗರಿಕತೆಯ ಬಹುದೊಡ್ಡ ಸಂಪತ್ತು. ಆಗಸ್ಟ್ ೧೫ರಂದು ನಾವು ಆಚರಿಸುವ ಸ್ವಾತಂತ್ರ್ಯ ದಿನಾಚರಣೆಯ ಸಂಭ್ರಮ ಈ ಕಾರಣಕ್ಕಾಗಿ ಸಕಾರಣ.

ಪರಮಪೂಜ್ಯ ಜಗದ್ಗುರು ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ಶರಣ ಚಳುವಳಿಯ ಜ್ಞಾನದಾಸೋಹ ಮತ್ತು ಅನ್ನದಾಸೋಹದ ಪರಂಪರ್ಯದ ಜೊತೆಗೆ ಉದ್ಯೋಗ ದಾಸೋಹದ ಮೂಲಕ ಸ್ವಾವಲಂಬಿ ಸಮುದಾಯವನ್ನು ಕಟ್ಟಲು ಪ್ರಯತ್ನಿಸಿದವರು. ಅವರ ಜಯಂತಿಯನ್ನು ಈ ತಿಂಗಳು ಆಚರಿಸಲಾಗುತ್ತಿದೆ.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿದ್ದಾರೆ. ಈ ಸಂಚಿಕೆಯಿಂದ ಎರಡು ಹೊಸ ಅಂಕಣಗಳು ಆರಂಭವಾಗಿವೆ. ಪ್ರೊ. ಓ.ಎಲ್. ನಾಗಭೂಷಣಸ್ವಾಮಿ ಅವರ ಅಪರಿಮಿತ ಹಾಗೂ ಪ್ರೊ. ಅಮರೇಶ ನುಗಡೋಣಿ ಅವರ ಅಗಣಿತ. ಈ ಇಬ್ಬರು ಮಹನೀಯರಿಗೂ ನಮ್ಮ ಕೃತಜ್ಞತೆಗಳು. ಡಾ. ಶ್ರೀನಿವಾಸಮೂರ್ತಿ ಯು., ವೆಂಕಟೇಶ ಕೆ. ಜನಾದ್ರಿ, ಡಾ. ಬಿ. ನಂಜುಂಡಸ್ವಾಮಿ, ಮಲ್ಲಿಕಾರ್ಜುನ ಯಾಳವಾರ, ಡಾ. ವಸುಂಧರಾ ಭೂಪತಿ, ಡಾ. ಲೋಕೇಶ ಅಗಸನಕಟ್ಟೆ, ಡಾ. ಶಶಿಕಲಾ ಮೊರಬದ, ವಿಶ್ವಾರಾಧ್ಯ ಸತ್ಯಂಪೇಟೆ, ಡಾ. ಲೀಲಾದೇವಿ ಆರ್. ಪ್ರಸಾದ್ ಅವರು ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಮತ್ತು ಮುಖಪುಟವನ್ನು ರೂಪಿಸಿಕೊಟ್ಟ ಶ್ರೀ ನಟರಾಜ್ ಎಸ್.ಎಲ್. ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

ಡಾ. ಎಂ.ಎಸ್. ಆಶಾದೇವಿ

ಸಂಪಾದಕರು

# ಅಧ್ಯಕ್ಷರ ನುಡಿ

ಆಗಸ್ಟು ತಿಂಗಳು ನಮ್ಮ ದೇಶದ ಇತಿಹಾಸದಲ್ಲಿ ಬಹಳ ಮಹತ್ವ ಪಡೆದಿದೆ. ೧೯೪೭ರ ಆಗಸ್ಟ್ ೧೫ರಂದು ಭಾರತ ಸ್ವಾತಂತ್ರ್ಯ ಪಡೆದದ್ದು ನಮಗೆಲ್ಲರಿಗೂ ತಿಳಿದ ವಿಷಯವಾಗಿದೆ. ಈ ಸ್ವಾತಂತ್ರ್ಯ ನಮಗೆ ಸಿಗಬೇಕಾದರೆ ಲಕ್ಷಾವದಿ ಜನರ ತ್ಯಾಗ ಬಲಿದಾನಗಳೇ ಕಾರಣ ಎಂದು ಬೇರೆ ಹೇಳಬೇಕಾಗಿಲ್ಲ. ಮಕ್ಕಳು, ಯುವಕರು, ಹಿರಿಯರು, ಪುರುಷರು, ಮಹಿಳೆಯರು, ಎಲ್ಲರೂ ಸೇರಿ, ಇಡೀ ಭಾರತ ದೇಶದ ಜನ ಮಹಾತ್ಮಾ ಗಾಂಧೀಜಿಯವರ ನೇತೃತ್ವದಲ್ಲಿ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' ಎಂದು ಒಕ್ಕೊರಲಿನಿಂದ ಘೋಷಣೆ ಮಾಡಿದಾಗ, ನಮ್ಮ ದೇಶವನ್ನು ನಮಗೆ ಒಪ್ಪಿಸಿ, ಇಲ್ಲಿಂದ ಹೋಗಬೇಕಾಯಿತು ಬ್ರಿಟಿಷರು. ಇದೆಲ್ಲ ಈಗ ಇತಿಹಾಸ.

ಭಾರತ ಸ್ವಾತಂತ್ರ್ಯದ ನಂತರ ಡಾ. ಬಿ.ಆರ್. ಅಂಬೇಡ್ಕರ್ ಅವರು ರಚಿಸಿದ ಸಂವಿಧಾನದ ಆಧಾರಸ್ಥಂಭವೆಂದರೆ ಸ್ವಾತಂತ್ರ್ಯ, ಸಮಾನತೆ, ಸಹೋದರತ್ವ. ೧೨ನೆಯ ಶತಮಾನದಲ್ಲಿ ಮಹಾತ್ಮಾ ಬಸವೇಶ್ವರರ ನೇತೃತ್ವದಲ್ಲಿ ನಡೆದ ಶರಣಕ್ರಾಂತಿಗೂ ಆಧಾರವಾದದ್ದು ಕೂಡ ಸ್ವಾತಂತ್ರ್ಯ ಸಮಾನತೆ ಮತ್ತು ಭ್ರಾತೃತ್ವ.

ಬಸವಾದಿ ಶರಣರು ಕಟ್ಟಬೇಕೆಂಬ ಸಮಾಜದ ಅಡಿಪಾಯ ಕೂಡ ಸ್ವಾತಂತ್ರ್ಯ, ಸಮಾನತೆ, ಸಹೋದರತ್ವವೇ ಆಗಿದ್ದವು. ಅಂತೆಯೇ ಅನುಭವ ಮಂಟಪದಲ್ಲಿ ಎಲ್ಲ ಜಾತಿ, ವರ್ಗ, ವೃತ್ತಿಗಳ ಜನರು ಪ್ರಧಾನಮಂತ್ರಿಗಳ ಜೊತೆಗೆ ಕುಳಿತು ಚರ್ಚೆ ಮಾಡುತ್ತಿದ್ದರು. ಹೆಚ್ಚಿನ ಅಕ್ಕಿಯನ್ನು ಆಯ್ದು ತಂದ ಮಾರಯ್ಯನಿಗೆ ಅವನ ಪತ್ನಿ ಲಕ್ಕಮ್ಮಳಿಗೆ ಇದು ನಿಮ್ಮ ಮನವೊ ಬಸವಣ್ಣನ ಅನುಮಾನದ ಚಿತ್ತವೊ ಎಂದು ಗಂಡನಿಗೆ ಮತ್ತು ಪ್ರಧಾನಮಂತ್ರಿಗೆ ಕೇಳುವ ಸ್ವಾತಂತ್ರ್ಯ ಮತ್ತು ಶಕ್ತಿ ಇತ್ತು. ಇದು ಶರಣಕ್ರಾಂತಿ ಕೆಳವರ್ಗದವರಿಗೆ, ದೀನದಲಿತರಿಗೆ, ದುರ್ಬಲವರ್ಗದವರಿಗೆ, ಮಹಿಳೆಯರಿಗೆ ನೀಡಿದ ಶಕ್ತಿ, ತುಂಬಿದ ಬಲ, ಕೊಟ್ಟ ಸ್ವಾತಂತ್ರ್ಯವಾಗಿತ್ತು.

'ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ', 'ನಡುವೆ ಸುಳಿವ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ' ಎಂಬ ಮಾತನ್ನು ಹೇಳುವುದರ ಮೂಲಕ ಮನುಷ್ಯ ಮನುಷ್ಯರಲ್ಲಿ ಕುಲ, ಜಾತಿ, ಕಸಬು, ವರ್ಣ, ವರ್ಗ, ಲಿಂಗಗಳ ಆಧಾರದಲ್ಲಿ ಭೇದವನೆಣಿಸಬಾರದು ಎಂದು ನಂಬಿದ, ಮಡಿದ, ಅದರಂತೆ ಆಚರಣೆಗೈದ ಶಿವಶರಣೆಯರು ಸಮಾನತೆಯ ಜ್ಯೋತಿಯನ್ನು ಹಚ್ಚಿದರು. ಅದರಂತೆ ಸಮಾಜವನ್ನು ಕಟ್ಟಿದರು.

'ಇವನಾರವ ಇವನಾರವ ಎಂದೆನಿಸದಿರಯ್ಯ', 'ಇವ ನಮ್ಮ ಮನೆಯ ಮಗನೆಂದಿನಸಯ್ಯ' ಮಾದಾರ ಚೆನ್ನಯ್ಯ ನಮ್ಮ ಅಪ್ಪಯ್ಯನು, ಡೋಹರ ಕಕ್ಕಯ್ಯನು ತಮ್ಮ ಬೊಪ್ಪಯ್ಯನೆಂದು ಎಲ್ಲರನ್ನು ಅಪ್ಪಿಕೊಂಡು, ಒಪ್ಪಿಕೊಂಡು ಮಾನವ ಜನಾಂಗವೆಲ್ಲ ಒಂದೇ ಎಂದು ಸಾರಿದರಲ್ಲದೇ 'ವಸುಧೈವ ಕುಟುಂಬ' ಎಂಬುದಕ್ಕೆ ಜೀವ ತುಂಬಿದವರು ಬಸವಾದಿ ಶರಣರು. ಯಾವುದೇ ಕಾನೂನು, ಸರ್ಕಾರಗಳ ಹಂಗಿಲ್ಲದೆ ಪ್ರಜಾಪ್ರಭುತ್ವದ ತಳಹದಿಯಲ್ಲಿ ಅನುಭವಮಂಟಪವನ್ನು ಸ್ಥಾಪಿಸಿ, ಪ್ರಥಮ ಸಂಸತ್ತಿನ ಕಲ್ಪನೆಯನ್ನು ಕೊಟ್ಟ ಬಸವಾದಿ ಶರಣರು ಅನುಭವ ಮಂಟಪದಲ್ಲಿ ಎಲ್ಲ ವೃತ್ತಿಯ ಜನರಿಗೆ, ಮಹಿಳೆಯರಿಗೆ ಪ್ರವೇಶ ನೀಡುವುದರ ಮೂಲಕ ವೃತ್ತಿ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ ಮುಂತಾದ ಸ್ವಾತಂತ್ರ್ಯಗಳನ್ನು ಕೊಡಮಾಡಿದರು.

ಜಸ್ಟೀಸ ಶಿವರಾಜ ಪಾಟೀಲರು ತಮ್ಮ ಒಂದು ಲೇಖನದಲ್ಲಿ ಸಂವಿಧಾನದ ಪ್ರತಿಯೊಂದು ಕಲಮಿಗೂ (Article) ವಚನ ಸಾಹಿತ್ಯದಲ್ಲಿ ಶರಣರ ವಚನಗಳು ಸಿಕ್ಕುತ್ತವೆ ಎಂದು ಹೇಳಿದ್ದಾರೆ. ಆಗ ಅವೆಲ್ಲವುಗಳನ್ನು ಸಾಮಾನ್ಯ ಜನರು ಅನುಭವಿಸಿದರು, ಆಚರಿಸಿದರು. ಆದರೆ ಈಗ ನಮ್ಮ ಸಂವಿಧಾನದಲ್ಲಿ ನಮಗೆ ಅನೇಕ ಮೂಲಭೂತ ಹಕ್ಕುಗಳಿದ್ದರೂ, ಸ್ವಾತಂತ್ರ್ಯಗಳಿದ್ದರೂ ನಾವು ಅನುಭವಿಸುತ್ತಿದ್ದೇವೆಯೆ? ಅದರಂತೆ ನಾವು ಮತ್ತು ನಮ್ಮ ಜನಪ್ರತಿನಿಧಿಗಳು ನಡೆದುಕೊಳ್ಳುತ್ತಿದ್ದೇವೆಯೆ ಎಂಬುದು ಯಕ್ಷ ಪ್ರಶ್ನೆ. ಭಾರತ ನಮ್ಮ ದೇಶ, ನಮ್ಮ ಮಾತೃಭೂಮಿ, ಅದಕ್ಕೋಸ್ಕರ ನಮ್ಮ ಸ್ವಾರ್ಥವನ್ನು ಬದಿಗಿಟ್ಟು, ರಾಷ್ಟ್ರಪ್ರೇಮ ಮುಖ್ಯವಾಗಿ ನಾವು ನಮ್ಮ ಬದುಕನ್ನು ಕಟ್ಟಿಕೊಳ್ಳಲು ಹಿರಿಯರ ತ್ಯಾಗ, ಬಲಿದಾನಗಳಿಂದಾಗಿ ಸಿಕ್ಕ ಸ್ವಾತಂತ್ರ್ಯವನ್ನು ಉಳಿಸೋಣ, ಬೆಳೆಸೋಣ, ಗಟ್ಟಿಗೊಳಿಸೋಣ.

**ಅಪ್ಪಾರಾವ ಅಕ್ಕೋಣೆ**

**ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು**



# ಶರಣರ ವಚನಗಳಲ್ಲಿ – ಅರ್ಥವ್ಯವಸ್ಥೆ

**ಡಾ. ಶ್ರೀನಿವಾಸಮೂರ್ತಿ ಯು.**

ಸಾಮ್ರಾಜ್ಯಶಾಹಿಗಳ ಹಾಗೂ ಬಂಡವಾಳಶಾಹಿಗಳ ಜಾಗತೀಕರಣವು ಎಲ್ಲ ಬಡರಾಷ್ಟ್ರಗಳ ಆರ್ಥಿಕ ವ್ಯವಸ್ಥೆಯ ಮೇಲೆ ದಾಳಿ ಮಾಡುತ್ತಾ, ಆಯಾ ನೆಲದ ಸಂಸ್ಕೃತಿಗಳನ್ನು ನಾಶಮಾಡುತ್ತಿದೆ. ಇಂದು ನಾವು ಬರೀ ಆರ್ಥಿಕವಾಗಿ ನಿರ್ಗತಿಕರಾಗುತ್ತಿಲ್ಲ, ಜನರಲ್ಲಿ ಕೊಳ್ಳಬಾಕು ಸಂಸ್ಕೃತಿಯನ್ನು ಹುಟ್ಟುಹಾಕುತ್ತಿರುವ ಜಾಹಿರಾತುಗಳಿಂದಾಗಿ ಹಾಗೂ ವ್ಯಾಪಾರಿಗಳ ಮನೋಧೋರಣೆಯಿಂದಾಗಿ ಜನರು ಬದುಕಿನ ಆನಂದದ ಕ್ಷಣಗಳನ್ನು ಕಳೆದುಕೊಳ್ಳುತ್ತಿದ್ದಾರೆ.

ಐಹಿಕ ವಸ್ತುಗಳಿಗಾಗಿ ಎಲ್ಲಾ ಮೌಲ್ಯಗಳನ್ನು ತ್ಯಾಗಮಾಡುವ ಮನುಷ್ಯರನ್ನು ಸಾಮಾಜಿಕ ಪ್ರಜ್ಞೆಯ ಬುನಾದಿಯಿಲ್ಲದ ಮನಸ್ಸುಗಳಿಂದಾಗಿ ಎಲ್ಲಾ ಕಡೆ ಮನುಷ್ಯರ ಜಾಗದಲ್ಲಿ ಗ್ರಾಹಕರನ್ನೇ ಕಾಣುತ್ತಿದ್ದೇವೆ, ಜೀವನಾವಶ್ಯಕ ವಸ್ತುಗಳನ್ನು ಮಾತ್ರ ಇಟ್ಟುಕೊಂಡು ನೆಮ್ಮದಿಯಿಂದ ಬದುಕುವ ಜನರನ್ನು ಕಂಡು ಅಪಹಾಸ್ಯ ಮಾಡುವ ವರ್ಗವೂ ಉದಯವಾಗಿದೆ. ಇಂದಿನ ಕಾಲದಲ್ಲಿ ಅರ್ಥವು(ವ್ಯವಹಾರವು) ಇಡೀ ಜಗತ್ತನ್ನು ಹತ್ತಿರ ತಂದು ಗ್ರಾಮವಾಗಿಸಿದೆ. ಆದರೆ ಜನರ ಹೃದಯಗಳ ನಡುವಿನ ಅಂತರ ಹೆಚ್ಚಾಗುತ್ತಿದೆ.

ಇಂತಹ ಪ್ರಕ್ಷುಬ್ಧ ಸ್ಥಿತಿಯಲ್ಲಿ ವಚನಗಳು ನಮಗೆ ಅರ್ಥ ಸಮಾನತೆಗೆ ದಾರಿ ದೀಪವಾಗಬಲ್ಲವೂ ಎಂಬುದರ ಅವಲೋಕನವು ಹಿಂದೆಂದಿಗಿಂತಲು ಇಂದು ತುಂಬಾ ಅಗತ್ಯವಿದೆ. ವೈಚಾರಿಕತೆಯಿಂದ ಕೂಡಿದ, ಅಭಿವೃದ್ಧಿ ಪರವಾಗಿದ್ದು ಸರಳ ಜೀವನ ನಡೆಸುವ ಸೀದಾ–ಸಾದಾ ಮನುಷ್ಯರಿರುವ ಸಮಾಜವನ್ನು ವಚನ ಚಳುವಳಿ ಬಯಸುತ್ತದೆ. ಆರ್ಥಿಕ ಅಸಮಾನತೆಯೇ ಜಗತ್ತಿನ ಸ್ವಾಸ್ಥ್ಯ ಕೆಡಿಸಲು ಪ್ರಮುಖ ಕಾರಣವಾಗಿದೆ. ಇದನ್ನು ಅರಿತಿದ್ದ ಶರಣರು ಆರ್ಥಿಕ ಸಮಾನತೆ ತರುವುದಕ್ಕಾಗಿಯೇ ಶ್ರಮಿಸಿದರು. ಸರ್ವಸಮಾನತೆಗಾಗಿ ಅವರು ಬಳಸಿದ ಸೂತ್ರವೆಂದರೆ ಕಾಯಕ–ದಾಸೋಹ. ಪ್ರತಿಯೊಬ್ಬರೂ ಕಾಯಕ ಮಾಡಲೇ ಬೇಕು. ಕಾಯಕದಿಂದ ಬಂದ ಉತ್ಪತ್ತಿ ಸಂಗ್ರಹವಾಗಬಾರದು–ಎಂಬುದು ಪ್ರಮುಖ ನೀತಿ. ಕಾಯಕವು ಶುದ್ಧವಾಗಿರಬೇಕು, ಆಗ ಅದರಿಂದ ಬಂದ ದ್ರವ್ಯವು ಪವಿತ್ರವಾಗಿರುತ್ತದೆ. ಆ ದ್ರವ್ಯದಿಂದ ದಾಸೋಹ ನಡೆಯಬೇಕು. ನರನ ಸಂಗ್ರಹ ಬುದ್ದಿಯ ಹಿಂದೆ ಇರುವ ಸಾಮಾಜಿಕ ಕ್ರೌರ್ಯವನ್ನು ತೋರಿಸಿಕೊಟ್ಟವರು ಬಸವಾದಿ ಶರಣರು.

**ಹಡೆದೊಡೆವೆ ವಸ್ತುವನ್ನು ಮೃಢಭಕ್ತರಿಗಲ್ಲದೆ,**
**ಕಡಬಡ್ಡಿಕೊಡಲಾಗದು,**
**ಬಂದಡೊಂದು ಲೇಸು, ಬಾರದಿದ್ದರೆಡರು ಲೇಸು,**
**ಅಲ್ಲಿದ್ದೆಡೆಯೂ ಲಿಂಗಕ್ಕೆ ಬೋನ, ಇಲ್ಲಿದ್ದಡೆಯೂ ಲಿಂಗಕ್ಕೆ ಬೋನ.**
**ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ**
**ಬಂದಿತ್ತೆಂಬ ಪರಿಣಾಮವಿಲ್ಲ, ಬಾರದೆಂಬ ದುಃಖವಿಲ್ಲ.**
**ಇದು ಕಾರಣ ಕೂಡಲಸಂಗಮ ದೇವಾ,**
**ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು. – ಬಸವಣ್ಣ.**

ಮನುಷ್ಯನ ಕಾಯಕವು ಹಣವನ್ನು ಹಡೆಯಬೇಕು, ಆದರೆ ಆ ಹಣವು ಬಡ್ಡಿಯನ್ನು ಹಡೆಯಬಾರದು. ಕಾಯಕವು ಹಣಗಳಿಸುವ ಕ್ರಿಯೆ ಅಲ್ಲ. ಅದರಲ್ಲಿ ದೈಹಿಕ ಹಾಗು ಮಾನಸಿಕ

ಸಮತೋಲನವಿರಬೇಕು, ಸಂಗ್ರಹ ಬುದ್ಧಿ ಸಲ್ಲದು, ನಾವು ಕಾಯಕವನ್ನು ಮಾಡಲೇಬೇಕು. ಕಾಯಕದಿಂದ ಬಂದ ಹಣ, ವಸ್ತು, ದವಸ, ಧಾನ್ಯ ಏನೇ ಇರಲಿ ಬೇಕಾದಷ್ಟು ಇಟ್ಟುಕೊಂಡು ಮತ್ತೊಬ್ಬರಿಗೆ ಕೊಡಬೇಕು, ಅದು ಸಾಲವಾಗಿ, ಬಡ್ಡಿ ಪಡೆಯುವ ಸಲುವಾಗಿ ಕೊಡಲೇಬಾರದು, ಕೊನೆಗೆ ಕಡವಾಗಿಯೂ ಕೊಡಬಾರದು ಎನ್ನುತ್ತಾರೆ ಬಸವಣ್ಣ. ಅಗತ್ಯವಾಗಿರುವವರಿಗೆ (ಶರಣರಿಗೆ) ಕೊಡುವುದು ತಮ್ಮ ಕರ್ತವ್ಯವೆಂದು ಭಾವಿಸಿ, ವಿನಮ್ರವಾಗಿಕೊಡಬೇಕು, ಅವರು ತಿರುಗಿ ನೀಡಿದರೆ ಅಥವ ಬಳಸಿಕೊಂಡು ಉಳಿದಿದ್ದನ್ನು ವಾಪಾಸು ಮಾಡಿದರೆ ಅದು ಒಂದು ಲೇಸು, ಅಥವಾ ಅವರು (ಪಡೆದವರು) ತಾವು ಬಳಸಿಕೊಂಡು ಉಳಿದಿದ್ದನ್ನು ಇತರರಿಗೆ ನೀಡಿದರೆ "ಎರಡು ಲೇಸು". ನಮ್ಮ ಬಳಿ ಇದ್ದರು ಅದು ಲಿಂಗ (ಸಮಾಜ)ಕ್ಕೆ ಬೋನ, ಅಲ್ಲಿದ್ದರೂ ಅಂದರೆ ಪಡೆದವರ ಬಳಿ ಇದ್ದರೂ ಇನ್ನೂ ಹೆಚ್ಚು ಉಪಯುಕ್ತ, ಅಂದರೆ ಸಮಾಜಕ್ಕೆ ಉಪಯುಕ್ತ ಎನ್ನುತ್ತಾನೆ ಬಸವಣ್ಣ. ಬಸವಣ್ಣನವರ ಅದ್ಭುತವಾದ ಚಿಂತನೆ ಏನೆಂದರೆ, ದಾನವು ಬೇಡವೆನ್ನುತ್ತಾರೆ, "ದಾನವು" ಕೊಡುವವನನ್ನು ಅಹಂಕಾರಿಯನ್ನಾಗಿ ಮಾಡಬಹುದು. ತೆಗೆದುಕೊಳ್ಳುವವನ ಆತ್ಮಗೌರವವನ್ನು "ಧ್ವಂಸ" ಮಾಡಬಹುದು, ಕೊಡುವವರಲ್ಲಿ ಕಿಂಕರಭಾವ ಮೂಡಬೇಕು. ಈ ಕಾರಣದಿಂದಲೇ ದಾನಕ್ಕೆ ಪರ್ಯಾಯವಾಗಿ "ದಾಸೋಹ" ಬಂದಿತು.

**ಜನ್ಮ ಜನ್ಮಕ್ಕೆ ಹೋಗಲೀಯದೆ, ಸೋಹಂ ಎಂದೆನಿಸದೆ**
**ದಾಸೋಹಂ ಎಂದೆನಿಸಯ್ಯ,**
**ಲಿಂಗ ಜಂಗಮದ ಪ್ರಸಾದವ ತೋರಿ ಬದುಕಿಸಯ್ಯ**
**ಕೂಡಲಸಂಗಮದೇವಾ. –ಬಸವಣ್ಣ**

"ಸೋಹಂ" (ನಾನೇ ಆತನು,ನಾನೇ ದೇವರು) ಎಂಬ ಭಾವದಿಂದ ಬಸವಣ್ಣನವರು ದೂರ ಉಳಿಯುತ್ತಾರೆ, "ಸೋಹಂ" ಅಹಂ ಆಗುವುದನ್ನು ತಪ್ಪಿಸಲು ಬಸವಣ್ಣನವರು "ದಾಸೋಂ" ಮಾರ್ಗ ಸೂಚಿಸುತ್ತಾರೆ. ದಾಸೋಹಂ ಭಾವವು ಅಹಂಕಾರ ಎಂಬ ರೋಗಕ್ಕೆ ಔಷಧಿಯಾಗುತ್ತದೆ.

ವಚನಕಾರರ ಪ್ರಕಾರ ಸಮಾಜದಲ್ಲಿ "ಅರ್ಥಸಮಾನತೆ" ಬರಬೇಕಾದರೆ ಎಲ್ಲರು ಕಾಯಕ ಮಾಡಲೇಬೇಕು, ಕಾಯಕವು ಪರಿಶುದ್ಧವಾಗಿರಬೇಕು, ಕಾಯಕದಿಂದ ಬಂದ ದ್ರವ್ಯವನ್ನು ಸಂಗ್ರಹಿಸಬಾರದು. ಶುದ್ಧ ಮನಸ್ಸಿನಿಂದ ಅದು ದಾಸೋಹಕ್ಕೆ ಬಳಕೆಯಾಗಬೇಕು, ಈ ಮಾತಿಗೆ ಪೂರಕವಾದ ಆಯ್ದಕ್ಕಿ ಮಾರಯ್ಯನ ವಚನ ಹೀಗಿದೆ....

**ಕಾಯಕದಲ್ಲಿ ನಿರತನಾದೊಡೆ, ಗುರುದರ್ಶನವಾದಡೂ**
**ಮರೆಯಬೇಕು, ಲಿಂಗ ಪೂಜೆಯಾದಡೂ ಮರೆಯಬೇಕು,**
**ಜಂಗಮ ಮುಂದೆ ನಿಂದಿದ್ದಡೂ ಹಂಗಹರಿಯಬೇಕು,**
**ಕಾಯಕ ಕೈಲಾಸವಾದ ಕಾರಣ,**
**ಅಮರೇಶ್ವರ ಲಿಂಗಾಯಿತ್ತಾದಡೂ ಕಾಯದೊಳುಗು. –ಆಯ್ದಕ್ಕಿಮಾರಯ್ಯ.**

ಕಾಯಕದ ಮಹತ್ವವನ್ನು ಎತ್ತಿಹಿಡಿದ ವಚನ ಇದಾಗಿದೆ, ಶರಣರ ವಿಚಾರಗಳನ್ನು ಗಮನಿಸಿದಾಗ ಅವರು ಮೂರು ಮುಖ್ಯ ವಿಚಾರಗಳನ್ನು ಪ್ರತಿಪಾದಿಸಿದ್ದು ಕಂಡುಬರುತ್ತದೆ. ಕಾಯಕ, ದಾಸೋಹ, ಲಿಂಗಪೂಜೆ. ಕಾಯಕ ಎಂದೋ ಒಂದು ದಿನ ಮಾಡಿ ವಿಶ್ರಾಂತಿ ಪಡೆಯುವುದಲ್ಲ, ಅದು ಉಸಿರಾಟದಂತೆ ನಿರಂತರವಾಗಿ ನಡೆಯುವ ಕ್ರಿಯೆ, ಕಾಯಕ



ಮಾಡುವಾಗ ಗುರುದರ್ಶನ, ಲಿಂಗಪೂಜೆ, ಜಂಗಮ–ದಾಸೋಹ ಇವುಗಳನ್ನು ಮರೆತರೂ ಬಾಧೆ ಇಲ್ಲ. ಜಂಗಮ ಎಂದರೆ ಸಮಾಜ ಆ ಸಮಾಜ ಮುಂದೆನಿಂತು ನೀ ಮಾಡುವ ಕೆಲಸ ನೋಡುತ್ತಾ ಹೆಸರಿಟ್ಟರು, ವ್ಯಂಗವಾಡಿದರು, ಹಂಗ ಹರಿಯಬೇಕು. ಅಂದರೆ ಯಾರ ಮುಲಾಜೀಗು ಕಾಯಕ ಮಾಡಬಾರದು, ನಮ್ಮ ತೃಪ್ತಿಗೆ ಮಾಡಬೇಕು, ಅಂದಾಗ ಕಾಯಕವೇ ಪೂಜೆ ಆಗುತ್ತದೆ–ಎನ್ನುತ್ತಾರೆ ಆಯ್ದಕ್ಕಿ ಮಾರಯ್ಯ.

ಈ ದೇಶದಲ್ಲಿ ಬಡತನವಿದೆ, ಇದಕ್ಕೆ ಅನೇಕ ಕಾರಣಗಳಿದ್ದರು ಸೋಮಾರಿತನವೂ ಪ್ರಮುಖವೆನಿಸುತ್ತದೆ, ಕಷ್ಟಪಟ್ಟು ದುಡಿಯುವ ಕೈಗಳು ಕೆಲವಾದರೆ ಶ್ರಮಪಡದೆ ಉಣ್ಣುವ ಬಾಯಿಗಳು ಹಲವು, ಶ್ರಮಿಕರಿಗೆ ಹೊಟ್ಟೆ ತುಂಬಾ ಅನ್ನ, ಮೈತುಂಬಾ ಬಟ್ಟೆ, ಇರಲು ಮನೆ ಇಲ್ಲದ ವಾತಾವರಣದಿಂದಾಗಿ ಸಮಾಜದಲ್ಲಿ ಬಡವ–ಶ್ರೀಮಂತ ಎನ್ನುವ ಅಸಮಾನತೆ ಬೆಳೆದಿದೆ. ಮಾಡುವ ಕೆಲಸದಲ್ಲಿ ಉತ್ತಮ, ಕನಿಷ್ಟ ಎಂಬ ತಾರತಮ್ಯಗಳಿವೆ. ಕೆಲಸದ ಆಧಾರದ ಮೇಲೆ ವ್ಯಕ್ತಿಯ ಯೋಗ್ಯತೆಯ ಅಳೆಯುವ ವಿಚಿತ್ರ ಪರಿಸ್ಥಿತಿ ನಮ್ಮ ನಡುವೆ ಇದೆ. ಇದನ್ನು ಕಂಡ ಶರಣರು ಕಾಯಕದ ಪ್ರಜ್ಞೆಯನ್ನು ಸಮಾಜದಲ್ಲಿ ಜಾರಿಗೆ ತಂದರು. ಪ್ರತಿಯೊಬ್ಬರು ದುಡಿಯುವುದು ಕಡ್ಡಾಯವಾಗಬೇಕು, ಅವನ ದುಡಿಮೆ ವ್ಯಕ್ತಿಯ ಮತ್ತು ಸಮಾಜದ ಒಳಿತೆಗೆ ಕಾರಣವಾಗಬೇಕು, ಆ ನಿಟ್ಟಿನಲ್ಲಿ ಅವರು ಅದಕ್ಕೆ ಉದ್ಯೋಗ, ಕೆಲಸ ಎನ್ನದೆ "ಕಾಯಕ" ಎಂದು ಕರೆದರು. ಕಾಯಕ ಸರ್ವರಿಗೂ ಸಮಾನ, ಅದರಲ್ಲಿ ಮೇಲು–ಕೀಳು ಇಲ್ಲ. ಆ ಕಾಯಕವೇ ಕೈಲಾಸ ಎಂಬ ಹಂತಕ್ಕೆ ಶರಣರು ಬಂದರು.

**ಮನಶುದ್ಧವಿಲ್ಲದವಂಗೆ,ದ್ರವ್ಯದ ಬಡತನವಲ್ಲದೆ**
**ಚಿತ್ತ ಶುದ್ಧದಲಿ ಕಾಯಕ ಮಾಡುವಲ್ಲಿ**
**ಸದ್ಭಕ್ತಂಗೆ ಎತ್ತನೋಡಿದಡತ್ತ ಲಕ್ಷ್ಮಿತಾನಾಗಿಪ್ಪಳು.**
**ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗದ ಸೇವೆಯುಳ್ಳನ್ನಕ್ಕರ –ಆಯ್ದಕ್ಕಿ ಲಕ್ಕಮ್ಮ.**

ಆಯ್ದಕ್ಕಿ ಲಕ್ಕಮ್ಮ ಕಾಯಕಕ್ಕೆ ವಿಶೇಷ ಒತ್ತುಕೊಟ್ಟಂತಹ ಶಿವಶರಣೆ, ಬಡತನ–ಶ್ರೀಮಂತಿಕೆ, ಯಾರಿಗೂ ಶಾಶ್ವತವಲ್ಲ, ಅನೇಕ ಜನರು ನಾವು ಬಡವರಾಗಿ ಹುಟ್ಟಿದ್ದೇ ಒಂದು ದೊಡ್ಡ ಶಾಪ ಅಂದು ಕೊಳ್ಳುತ್ತಾರೆ, ಬೇರೆಯವರು ಎಷ್ಟು ಶ್ರೀಮಂತರಾಗಿದ್ದಾರೆ ಎಂದು ಕೊರಗುತ್ತಾರೆ, ನಿಜವಾದ ಶ್ರೀಮಂತಿಕೆ, ಬಡತನ ಬಾಹ್ಯ ಸಂಪತ್ತಿನಲ್ಲಿಲ್ಲ, ಸತ್ಯ ಶುದ್ಧ ಕಾಯಕದಲ್ಲಿದೆ, ಲಕ್ಕಮ್ಮ ಅಂತಹ ಸತ್ಯ ಶುದ್ಧ ಕಾಯಕವನ್ನು ಮೈಗೂಡಿಸಿಕೊಂಡ ಶರಣೆ. ಲಕ್ಕಮ್ಮ ಪತಿ ಮಾರಯ್ಯ ಅಕ್ಕಿಯನ್ನು ಆಯ್ದು ತಂದರೆ, ಅದನ್ನು ಪ್ರಸಾದ ಮಾಡಿ ಬೇರೆಯವರಿಗೆ ಎಡೆಮಾಡಿ ನಂತರ ತಾವು ಸ್ವೀಕರಿಸುತ್ತಿದ್ದರು. ಮನಸ್ಸು ಶುದ್ಧವಾಗಿದ್ದರೆ, ತೃಪ್ತಿಯಿಂದ ಕೂಡಿದ್ದರೆ ಸಂಪತ್ತಿನ ಕೊರತೆಯೇ ಇಲ್ಲ ಎನ್ನುವುದು ಲಕ್ಕಮ್ಮನ ಅಭಿಪ್ರಾಯ. ಸದ್ಭಾವನೆಯಿಂದ ಕಾಯಕ ಮಾಡುತ್ತಾ ಹೋದರೆ, ತೃಪ್ತಿ ಮನದಲ್ಲಿದ್ದರೆ ಎತ್ತ ನೋಡಿದರೂ ಸಂಪತ್ತು ಕಂಡುಬರುತ್ತದೆ ಎನ್ನುತ್ತಾಳೆ ಲಕ್ಕಮ್ಮ.

ಇವು ಆಚರಣೆಗೆ ಈ ಕಾಲದಲ್ಲಿ ಕಷ್ಟವೆನಿಸಿದರು, ಅವರಿಗೆ ಇವು ಪವಿತ್ರವಾದ ವಿಚಾರಗಳು, ಹಾಗಾಗಿ ಅವರಿಗೆ ಅಂದಿನದಷ್ಟನ್ನೇ ಬಳಸುವಲ್ಲಿ, ಬಯಸುವಲ್ಲಿ ಬದ್ಧರಾಗಿದ್ದರು. ಈ ಒಂದು ತತ್ವ ಆರ್ಥಿಕ ಸಮಾನತೆ ತರುವಲ್ಲಿ ತುಂಬಾ ಸಹಾಯಕವಾಗಿ ನಿಂತಿತು.

**ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ**
**ಅನ್ನದೊಳಗೊಂದಗುಳ ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ**

**ನಿಮ್ಮಾಣೆ ನಿಮ್ಮ ಪ್ರಮಥರಾಣೆ!**

**ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ. -ಬಸವಣ್ಣ.**

ಸಂಗ್ರಹ ನೀತಿಗೆ ಬಸವಣ್ಣನವರು ವಿರುದ್ಧವಾಗಿದ್ದರು ಎಂದು ಹೇಳಲು ಈ ವಚನ ಸಾಕೆನಿಸುತ್ತೆ, ಬಸವಣ್ಣನವರು ಹೊನ್ನಿನೊಳಗೊಂದೊರೆಗಾಗಿ, ಸೀರೆಯೊಳಗಿನೊಂದು ಎಳೆಗಾಗಿ, ಅನ್ನದೊಳೊಂದು ಅಗಳಿಗಾಗಿಯೂ ಆಶಿಸಲಿಲ್ಲ. ಅದು ನಾಳಿನ ಬದುಕಿಗೆ ಬೇಕು ಎಂದು ಚಿಂತಿಸಲಿಲ್ಲ, ಹಪಹಪಿಸಲಿಲ್ಲ. ತನ್ನದನ್ನು ತನ್ನವರಿಗೆ ವಿನಿಯೋಗಿಸಿ, ಸುಖಿಸಿದವನಲ್ಲ ಬಸವಣ್ಣ, ಅದನ್ನು ಶಿವ-ಶರಣರ ಜೊತೆ ಹಂಚಿಕೊಂಡು ಉಣ್ಣುವ ನೀತಿಯನ್ನು ಹೇಳಿದವರು. ಈ ಅಸಂಗ್ರಹ ನೀತಿಗೆ ಇನ್ನೊಂದು ಚಿತ್ರಣವನ್ನು ಬಸವಣ್ಣನವರು ಕೊಡುತ್ತಾ ಹೀಗೆ ಹೇಳುತ್ತಾರೆ...

**ಒಡನಿರ್ದ ಸತಿಯೆಂದು ನಾಚಿರ್ದೆನಯ್ಯಾ,**

**ಕೈವಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯಾ,**

**ಅಯ್ಯೋ, ನಮ್ಮಯ್ಯನ ಕೈನೊಂದಿತ್ತು,**

**ತೆಗೆದುಕೊಡಾ,ಎಲಾ ಚಾಂಡಾಲಗಿತ್ತಿ**

**ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದೆಡೆ**

**ಕೂಡಲ ಸಂಗನಲ್ಲದೆ ಆರೂ ಅಲ್ಲ.**

ಬಸವಣ್ಣನಿಗೆ ತನ್ನ ಹೆಂಡತಿಯ ಮೈಮೇಲಿನ ಒಡವೆಗಳೂ ಒಂದು ರೀತಿಯಲ್ಲಿ ಸಂಗ್ರಹವೆ, ಒಡವೆ ಇಲ್ಲದಿದ್ದರೆ ಕಳ್ಳನ ಪ್ರಸಂಗವೇ ಎದುರಾಗುತ್ತಿರಲಿಲ್ಲ, ಆಗ ಬಸವಣ್ಣನಿಗೆ ಒಳಗೊಳಗೆ ಆತಂಕ ಕಾಡಿರಬೇಕು ತಾನು ಹೇಳಿದ ತತ್ವಪಾಲನೆ ತನ್ನಿಂದಲೇ ಆಗಲಿಲ್ಲವಲ್ಲ ಎಂಬ ತಳಮಳವಿದೆ, ಆ ಕಾರಣದಿಂದ ತನ್ನನ್ನು ತಾನೇ ಕಳ್ಳನೆಂದು ಕರೆದುಕೊಂಡಿದ್ದಾನೆ, ಬಲುಗಳ್ಳನಾಗಿ ಬಂದವನನ್ನು ಕೂಡಲಸಂಗ ಅಂದರೆ ಸಾಕ್ಷಾತ್ ಶಿವನೆ ಎನ್ನುತ್ತಾನೆ.

ಅತಿಸಂಗ್ರಹ ಮಾಡುವ ನಾವೆಲ್ಲರೂ ಒಂದು ರೀತಿಯಲ್ಲಿ ಕಳ್ಳರೆ, ನುಡಿದಂತೆ ನಡೆದವರು ವಚನಕಾರರು. ಅವರ ಈ ಅಭಿಪ್ರಾಯ ಆದರ್ಶವಾದುದು. ಆಯ್ದಕ್ಕಿ ಲಕ್ಕಮ್ಮ ಕೂಡ ದಿನವೊಂದಕ್ಕೆ ಎಷ್ಟು ಅಕ್ಕಿ ಬೇಕೊ ಅಷ್ಟೇ ಅಕ್ಕಿಯನ್ನು ತರುತ್ತಿದ್ದ ಗಂಡ ಮಾರಯ್ಯ ಒಂದು ದಿನ ಅಗತ್ಯಕ್ಕಿಂತ ಹೆಚ್ಚು ಅಕ್ಕಿಯನ್ನು ಆಯ್ದುತಂದಾಗ ಗಂಡನನ್ನು ನಿಷ್ಟುರದಿಂದ ಈ ಕೆಳಗಿನಂತೆ ಕೇಳುತ್ತಾಳೆ...

**ಆಸೆಯೆಂಬುದು ಅರಸಿಂಗಲ್ಲದೆ, ಶಿವ ಭಕ್ತರಿಗುಂಟೆ ಅಯ್ಯಾ?**

**ರೋಷವೆಂಬುದು ಯಮಧೂತರಿಗಲ್ಲದೆ,**

**ಅಜಾತರಿಗುಂಟೆ ಅಯ್ಯಾ ?**

**ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ ಮಾರಯ್ಯ ಪ್ರಿಯ**

**ಅಮರೇಶ್ವರ ಲಿಂಗಕ್ಕೆ ದೂರ ಮಾರಯ್ಯ.-ಆಯ್ದಕ್ಕಿ ಲಕ್ಕಮ್ಮ.**

ಪತಿ ಅಗತ್ಯಕ್ಕಿಂತ ಹೆಚ್ಚು ಅಕ್ಕಿಯನ್ನು ಆಯ್ದು ಮನೆಗೆ ತಂತಾಗ ಹೆಂಡತಿ ಲಕ್ಕಮ್ಮನಿಗೆ ಸಂತೋಷದ ಬದಲಿಗೆ ವೇದನೆ ಆಗುತ್ತದೆ. ಗಂಡನಿಗೆ ನಯವಾಗಿ ಕೇಳುತ್ತಾಳೆ "ಇಷ್ಟೊಂದು ಅಕ್ಕಿಯಾಸೆ" ನಿಮಗೇಕೆ ಬಂತು ಎಂದು, ನಾವು ಶರಣರು ಇದ್ದುದರಲ್ಲೇ ತೃಪ್ತಿಪಡಬೇಕು. ನಾಳೆಗೆ ಬೇಕು ಎಂದು ಕೂಡಿಡುವ ಸ್ವಭಾವ ನಮ್ಮದಲ್ಲ. ಈ ರೀತಿ ಹೆಚ್ಚು ಅಕ್ಕಿತಂದರೆ ಅದು ಇನ್ನೊಬ್ಬರ ಹೊಟ್ಟೆಯ ಮೇಲೆ ಹೊಡೆದ ಹಾಗೆ. ಆಸೆ ರಾಜನಿಗೆ ಅಂದರೆ ಐಷರಾಮಿ ಬದುಕು ನಡೆಸುವವರಿಗೆ ನಮಗಲ್ಲ ಎಂದು ಹೇಳುತ್ತಾ... ಎಲ್ಲಿಂದ ತಂದಿರೋ ಅಲ್ಲಿಯೇ



ಸುರಿದು ಬರಲು ಹೇಳುತ್ತಾಳೆ. ಇದು ಲಕ್ಕಮ್ಮನ ಕಾಯಕ ಹಾಗು ದಾಸೋಹದ ಪ್ರಜ್ಞೆ.

**ಗುಬ್ಬಿ ಹೆರರ ಮನೆಯ ತನ್ನಮನೆಯಂತೆ**

**ಧರೆ,ಧನ,ವನಿತೆಯರು ಎನ್ನುವರು-ತನ್ನವರೆಂದು**

**ಹೋರಿ- ಹೋರಿ ಸಾಯುತ್ತಿದೆ -ಜೀವ,**

**ಸರ್ವಕರ್ತೃ ಕೂಡಲ ಚೆನ್ನ ಸಂಗಯ್ಯನೆಂದರಿಯದೆ. -ಚನ್ನಬಸವಣ್ಣ.**

ಗುಬ್ಬಿ ಹೇಗೆ ಬೇರೆಯವರ ಮನೆಯೇ ತನ್ನ ಮನೆಯೆನ್ನುವಂತೆ ಭಾವಿಸಿ ಸಂಸಾರ ನಡೆಸುವುದೋ ಅದೇ ರೀತಿ ಮಾನವ ಧರೆ, ಧನ, ವನಿತೆಯರು, ತನ್ನವರೆಂದು ಭಾವಿಸಿ ಅವರನ್ನು ಸಾಕಿ ಸಲಹಲು ಹೋಗಿ ಸಾಯುವನು ಅಂದರೆ ಅದರಲ್ಲೇ ಒದ್ದಾಡುತ್ತಾನೆ, ನಾವು ದಿನ ನಿತ್ಯ ಮಾಡುತ್ತಿರುವುದೇನೆಂದರೆ ನನ್ನ ಹೆಂಡತಿ, ಮಕ್ಕಳು, ನನ್ನ ಮನೆ, ನನ್ನ ಹೊಲ, ನನ್ನ ಗಂಡ, ಎಲ್ಲವು ನನ್ನದು, ನನ್ನದು.... ಇವರಿಗಾಗಿ ಏನೆಲ್ಲಾ ಸಂಪಾದಿಸುತ್ತೇವೆ, ಅವರನ್ನು ತೃಪ್ತಿಪಡಿಸಲು, ಸುಖವಾಗಿಡಬೇಕೆಂಬ ಸಂಭ್ರಮದಲ್ಲಿ ಮಾಡಬಾರದ ಪಾಪದ ಕೆಲಸಗಳನ್ನು ಮಾಡಿಬಿಡುತ್ತೇವೆ. ವಾಸ್ತವವಾಗಿ ಎಲ್ಲದಕ್ಕೂ ಒಡೆಯ "ಶಿವ" ಎಲ್ಲ ಸೃಷ್ಟಿಗೂ ಅವನೇ ಯಜಮಾನ. ಯಾರು ಶಿವನನ್ನು ನಂಬುತ್ತಾರೋ ಅವರು ನಿಜವಾದ ನೆಮ್ಮದಿ ಪಡೆಯಲು ಸಾಧ್ಯ. ಅದನ್ನು ಬಿಟ್ಟು ನಾವು ಗುಬ್ಬಿ ಹೇಗೆ ಬೇರೆಯವರ ಮನೆಯನ್ನು ತನ್ನದೆಂದು ಸಂಭ್ರಮಪಟ್ಟು ಕೊನೆಗೆ ಸತ್ತು ಹೋಗುತ್ತದೆಯೋ! ಹಾಗೇನೆ ನಾವು ಈ ಧರೆ, ಈ ಧನ ವನಿತೆಯರು ನನ್ನವರೆಂದು ಭಾವಿಸಿಕೊಂಡು ಹೋರಾಟಮಾಡಿದರೆ, ನಾಳೆ ಆ ಸಂಬಂಧದಿಂದಾ -ಗಿಯೆ ನೋವು ಅನುಭವಿಸಬೇಕಾಗುತ್ತದೆ. ಹಾಗಂದಾಕ್ಷಣ ಇವನ್ನೆಲ್ಲಾ ತ್ಯಜಿಸಬೇಕೆಂದು ಅಲ್ಲ. ಎಲ್ಲವೂ ಶಿವನದೇಣಿಗೆ ಎಂದು ಭಾವಿಸಿ, ಹಿತವಾಗಿ ಮಿತವಾಗಿ ಅವುಗಳ ಬಳಕೆ ಮಾಡಿಕೊಳ್ಳಬೇಕು. ನಮಗೆ ಅಗತ್ಯವಾದದ್ದನ್ನು ಅವಶ್ಯಕತೆ ಇದ್ದಷ್ಟನ್ನು ಬಳಸಿಕೊಂಡು ವಿವೇಕದಿಂದ ಬದುಕಬೇಕು. ಎಲ್ಲವನ್ನು ಶಿವನ ಪ್ರಸಾದವೆಂದು ಭಾವಿಸಿ ಸಮಾಜದಲ್ಲಿ ಸರ್ವರೊಂದಿಗೆ ಬೆರೆತು ಸಾಮರಸ್ಯದಿಂದ ಬಾಳಿದಾಗ ಬದುಕು ಬಂಗಾರವಾಗುತ್ತದೆ ಎನ್ನುತ್ತಾರೆ ಚನ್ನಬಸವಣ್ಣ.

ಮತ್ತೊಂದು ರೀತಿಯಲ್ಲಿ ನಾವು ಯೋಚಿಸಿದರೆ, ನಾವೆಷ್ಟೇ ಸಂಪಾದನೆ ಮಾಡಿದರೂ, ಊಟ ಹೊಟ್ಟೆ ತುಂಬುವಷ್ಟು ಸಾಕು, ಹಾಲು ಬೇಕಾದರೆ ಒಂದು ಆಕಳು ಸಾಕು, ಮಲಗಲಿಕ್ಕೆ ಅರ್ಧ ಮಂಚ ಸಾಕು... ಅಂದರೆ ಸುಂದರ ಹಾಗೂ ನೆಮ್ಮದಿಯ ಬದುಕಿಗೆ ಕನಿಷ್ಠ ಅಗತ್ಯತೆಗಳು ಸಾಕು. ಅದು ಬಿಟ್ಟು ನಾವು ಭೂಮಿಗಾಗಿ, ಹೆಣ್ಣಿಗಾಗಿ, ಒಡವೆಗಾಗಿ, ಆಯುಷ್ಯಕ್ಕಾಗಿ ಬಡಿದಾಡುತ್ತೇವೆ. ಅವು ಯಾವೂ ನಮ್ಮ ಜೊತೆ ಬರುವವಲ್ಲ, ನಾವು ಹೋದರೆ ಅವು ಯಾರ ಜೊತೆಗೊ ಸೇರಿಬಿಡುತ್ತವೆ ಆದರೆ ಸಾವಿಗೆ ಯಾರೂ ಸಂಗಡವಿಲ್ಲ ಎನ್ನುತ್ತಾರೆ ವಚನಕಾರರು.

**ಆನೆ-ಕುದುರೆ ಭಂಡಾರವಿರ್ದಡೇನೋ?**

**ತಾನುಂಬುದು ಪಡಿಯಕ್ಕಿ, ಒಂದಾವಿನ ಹಾಲು**

**ಮಲಗುವುದರ್ಧ ಮಂಚ.**

**ಈ ಹುರುಳಿಲ್ಲದ ಸಿರಿಯನೆಚ್ಚಿಕೆಡಬೇಡ ಮನುಜ.**

**ಒಡಲು-ಭೂಮಿಯ ಸಂಗ, ಒಡವೆ ತಾನೇನಪ್ಪುದೋ?**

**ಕೈವಿಡಿದ ಮಡದಿ ಪರರ ಸಂಗ ಪ್ರಾಣ ವಾಯುವಿನ ಸಂಗ.**

**ಸಾವಿಂಗೆ ಸಂಗಡವಾರು ಇಲ್ಲಕಾಣಾ,**

**ನಿಃಕಳಂಕ ಮಲ್ಲಿಕಾರ್ಜುನ.**

**ಇದೇ ಅರ್ಥ ಬರುವ ಜೇಡರ ದಾಸಿಮಯ್ಯ ರವರು ಎರಡು ಸಾಲುಗಳಲ್ಲಿ ಹೇಳುತ್ತಾರೆ.**

**ಇಂದಿಂಗೆಂತು, ನಾಳಿಂಗೆಂತೆಂದು ಚಿಂತಿಸಲೇಕೆ?**

**ತಂದಿಕ್ಕುವ ಶಿವಂಗೆ ಬಡತನವೇ? ರಾಮನಾಥ.**

ಸಂಗ್ರಹಿಸುವ ಬುದ್ಧಿ ಬಿಡು, ಈ ದಿನ ಕಳೆಯುವುದು ಹೇಗೆ? ನಾಳೆ ಹೇಗಪ್ಪಾ ಎಂಬ ಚಿಂತೆ ತರವಲ್ಲ: ಎಲ್ಲವನ್ನು ನೋಡಿಕೊಳ್ಳುವ ಶಿವನಿದ್ದಾನೆ–ಎಂದು ಬಡವನಿಗೆ ಆತ್ಮಸ್ಥೈರ್ಯ ತುಂಬುತ್ತಾನೆ ಜೇಡರದಾಸಿಮಯ್ಯ.

ಎಲ್ಲರೂ ಹಣ, ದ್ರವ್ಯ, ವಸ್ತು ಸಂಪಾದನೆ ಮಾಡಿ ಸುಖವಾಗಿದ್ದಾರೆ ನಾನು ಹಾಗೆ ಮಾಡಿ ಹಾಯಾಗಿರಬಹುದೆಂದು ನಂಬಿದ ಜನರಿಗೆ ಮೇಲಿನ ವಚನ ತಿಳಿಹೇಳುತ್ತದೆ ಮಾನವನ ಬದುಕಿನ ಅಂತಮ ಗುರಿ "ಸಂತೋಷ", ಆನಂದ ಅಥವಾ ಮೋಕ್ಷ. ಐಹಿಕ ಬದುಕಿನ ಗುರಿ ಆನಂದ ಈ ಆನಂದವು ಹಣ, ವಸ್ತು ದ್ರವ್ಯಗಳಿಂದ ಸಿಗದು ಎಂಬ ನಂಬಿಕೆ ನಮ್ಮಲ್ಲಿ ಬೇರೂರಬೇಕಿದೆ. ಅಕ್ಕಮಹಾದೇವಿ ತಳೆದ "ಅರ್ಥಸನ್ಯಾಸಿ" ಎಂಬ ನಿಲುವನ್ನು ನಾವು ಅರಿಯಬೇಕಿದೆ. ಅರ್ಥವು ತನ್ನಷ್ಟಕ್ಕೆ ತಾನೇ ಸನ್ಯಾಸಿಯಾಗುವುದಿಲ್ಲ. ಆದರೆ ಹಣಹೊಂದಿದವರು ಇದನ್ನು ಅರಿಯಬೇಕಿದೆ, ಆದರೆ ಮದ, ಮತ್ಸರ, ಲೋಭದಿಂದ ಧನವನ್ನು ಉಪಯೋಗಿಸ ಬಾರದು. ಈ ಭಾವಗಳಿಂದ ದೂರ ಉಳಿಯುವುದೆ ಅರ್ಥಸನ್ಯಾಸತ್ವ ಎಂದಿದ್ದಾರೆ.

**ಅರ್ಥಸನ್ಯಾಸಿಯಾದಡೇನಯ್ಯಾ**

**ಆವಂಗದಿಂದ ಬಂದಡೂ ಕೊಳ್ಳದಿರಬೇಕು.**

ಒಟ್ಟಾರೆಯಾಗಿ ಮನುಷ್ಯ ಬದುಕಿನ ಎಲ್ಲಾ ಕಾರ್ಯಗಳು ಶುದ್ಧ ಮನಸ್ಸಿನಿಂದ ಮಾಡುತ್ತಾ, ಹಣಕಾಸಿನ ವ್ಯವಹಾರಗಳಿಗೆ ಪ್ರಾಧಾನ್ಯತೆ ನೀಡದೆ ಪ್ರತಿಕಾಯಕವು ದೇವರಿಗೆ, ಸಮಾಜಕ್ಕೆ ಎಂದೇ ಮಾಡಿದರೆ ಬದುಕಿನಲ್ಲಿ ಯಾವ ಒತ್ತಡವೂ ಇರಲಾರದು. ಮಾನವ ಪ್ರಪಂಚದಲ್ಲಿ ಎಷ್ಟೇ ವಿಧದ ಕೆಲಸಗಳು ಮಾಡಿದರು ಈ ಕೆಳಗೆ ಸೂಚಿಸಿರುವ ಬಸವಣ್ಣನವರ ವಚನದಲ್ಲಿ ಮೂರು ಮುಖ್ಯ ಕಾಯಕಗಳಲ್ಲಿ ಕಂಡುಬರುತ್ತವೆ, ಅವೆಲ್ಲವೂ ಹೇಗೆ ಸಮಾಜಕ್ಕೆ ಪೂರಕವಾಗಿರಬೇಕು ಎಂಬುದನ್ನು ಹೇಳುತ್ತದೆ.

**ನಾನು ಆರಂಬವಮಾಡುವೆನಯ್ಯಾ ಗುರು ಪೂಜೆಗೆಂದು**

**ನಾನು ಬೆವಹಾರ ಮಾಡುವೆನಯ್ಯಾ, ಲಿಂಗಾರ್ಚನೆಗೆಂದು,**

**ನಾನು ಪರಸೇವೆ ಮಾಡುವೆನಯ್ಯಾ, ಜಂಗಮದಾಸೋಹಕ್ಕೆಂದು**

**–ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೀಯ ಮಾಡೆನು**

**ನಿಮ್ಮಸೊಮ್ಮಿಂಗೆ ಸಲ್ಲಿಸುವೆನು ನಿಮ್ಮಾಣೆ – ಬಸವಣ್ಣ.**

ನಮ್ಮ ಸಮಾಜದಲ್ಲಿ ನಮ್ಮವರು ಮಾಡುವ ವ್ಯವಸಾಯವು, ವ್ಯವಹಾರವು ಅಥವ ಎಲ್ಲ ವಿಧದ ಸೇವೆಗಳು ಗುರು, ಲಿಂಗ, ಜಂಗಮಕ್ಕೆ ಸಲ್ಲಬೇಕೆಂದು ಹೇಳುತ್ತಾನೆ ಬಸವಣ್ಣ, ಆ ಮೂಲಕ ಸಮಾಜದಲ್ಲಿ ಅರ್ಥಸಮಾನತೆ ಉಂಟಾಗಲು ಸಾಧ್ಯವಾಗಬಹುದು.

●

*ಉಪನ್ಯಾಸಕರು, ರಾಮನಗರ, ೧ನೆ ಅಡ್ಡರಸ್ತೆ, ಅವ್ವಂಬಾವಿ ವಾರ್ಡ್ ೩೫ ಸಿರಗುಪ್ಪ ರಸ್ತೆ,*

*ಬಳ್ಳಾರಿ – ೫೮೩ ೧೦೩ ೯೭೩೧೦ ೬೪೯೫೦*



## ಬಿತ್ತಿದ್ದನ್ನು ಬೆಳೆದುಕೋ... – ಅಥಣಿಯ ಶಿವಯೋಗಿಗಳ ನಿಲುವು

**ವೆಂಕಟೇಶ ಕೆ. ಜನಾದ್ರಿ**

"ಗುರುಲಿಂಗಜಂಗಮ" ಎಂಬುದು ಬಸವಣ್ಣನವರ ಧ್ಯೇಯವಾಗಿತ್ತು. ಬಸವ ಪಥಿಕರು ಗುರು, ಲಿಂಗ ಮತ್ತು ಜಂಗಮ ತತ್ವವನ್ನು ಬದುಕಿನಲ್ಲಿ ನಡೆದಾಗಲೇ ಅದು ಆ ಭಕ್ತನ ಸಂಪೂರ್ಣವಾದ ನಡೆನುಡಿಯ ಸಾಧನೆಯಾಗುತ್ತದೆ. ಇಂಥಹ ಸಾಧನೆಯ ಪಥದಲ್ಲಿ ಸಾಗಿದಾಗಲೇ ಅವರನ್ನು ಶರಣ ಎನ್ನಬಹುದೆನ್ನುವುದು ಶರಣ ಪಥ ಅನುಭಾವಿಸುತ್ತದೆ. ಹನ್ನೆರಡನೇ ಶತಮಾನದ ಬಸವಾದಿ ಪ್ರಮಥರನ್ನು ಸದಾ ತಮ್ಮೊಳಗೇ ಇಂಬಿಟ್ಟುಕೊಂಡು ಬಸವಾ ಬಸವಾ ಬಸವಾ... ಎಂದೇ ತಾವೇನೇ ಮಾಡಿದರೂ ಅದು ಬಸವನ ಕರುಣೆ. ತಾವೇನೇ ನುಡಿದರೂ ಅದು ಬಸವನ ನುಡಿ, ತಾವೇನೇ ನಡೆದರೂ ಅದು ಬಸವನ ಪಥ ಎಂದು ಬಸವನನ್ನೇ ಉಸಿರಾಡುತ್ತಾ ಹನ್ನೆರಡನೇ ಶತಮಾನದ ಬಸವಣ್ಣನನ್ನು ಅಕ್ಷರಶಃ ಬಾಳಿ ಬದುಕಿದ ೧೯ನೇ ಶತಮಾನದ ಬಸವಣ್ಣ ಎಂದೇ ಅಥಣಿಯ ಶಿವಯೋಗಿಗಳು ನನಗೆ ಅದೆಷ್ಟೋ ಸಲ ಭಾಸವಾಗುತ್ತದೆ.

ಅಥಣಿಯ ಶಿವಯೋಗಿಗಳ ಮೂಲ ಹೆಸರು "ಗುರು ಲಿಂಗಯ್ಯ" ಹನ್ನೆರಡನೇ ಶತಮಾನದ ಸಿದ್ದರಾಮ ಶಿವಯೋಗಿಗಳ ನಂತರ "ಶಿವಯೋಗಿಗಳು" ಎಂದು ಕರೆಯಿಸಿಕೊಳ್ಳುವಂಥ ಏಕೈಕ ಸಾಧಕರೆನ್ನಲು ನನ್ನ ಮನ ಬಯಸುತ್ತದೆ. ಅಥಣಿಯ ಈ ಮುರುಘೇಂದ್ರ ಶಿವಯೋಗಿಗಳು ಗುರುವನ್ನು ಮತ್ತು ಲಿಂಗವನ್ನು ಸೇರಿಸಿಕೊಂಡೇ ತಮ್ಮ ಹೆಸರಿನಲ್ಲಿ ಮತ್ತು ತಮ್ಮ ಕಾಯದಲ್ಲಿಂಬಿಟ್ಟುಕೊಂಡವರು. ಬರೀ ಹೆಸರನಲ್ಲ ಅವರು ಸ್ವತಃ ಗುರು ಮತ್ತು ಲಿಂಗ ಆಗಿಯೇ ನಡೆದುಕೊಂಡವರು. ಬಸವಣ್ಣನವರ ಇಷ್ಟಲಿಂಗ ಯೋಗಸಾಧನೆಯನ್ನು ಪರಿಪೂರ್ಣವಾಗಿ ಮೈಗೂಡಿಸಿಕೊಂಡ ಈ ಶರಣರು ಶಿವಯೋಗಿಗಳು ಎಂದೆನಿಸಿಕೊಳ್ಳುವಷ್ಟು ಸಾಧಿಸಿ ಅನುಭಾವಿಸಿದ್ದಾರೆ. ಅಥಣಿಯನ್ನು ತಮ್ಮ ಧರ್ಮಸ್ಥಳ ವನ್ನಾಗಿಸಿಕೊಂಡು ಸುತ್ತಮುತ್ತಲಿನ ಅದೆಷ್ಟೋ ವ್ಯಾಪ್ತಿಯುವರೆಗಿನ ಪ್ರದೇಶವನ್ನು ಕಲ್ಯಾಣವನ್ನಾಗಿಸಲು ಶ್ರಮಿಸಿದವರು.

ಇಂದಿನ ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ "ಇಂಗಳಗಾವಿ"ಯಲ್ಲಿ ಶರಣ ದಂಪತಿಗಳಾಗಿದ್ದ ರಾಚಯ್ಯ ಮತ್ತು ನೀಲಾಂಬೆಯವರ ಒಡಲ ಮಗುವಾಗಿ ಕ್ರಿ.ಶ. ೧೮೩೬ರಲ್ಲಿ ಜನಿಸಿದ ಈ ಮಗುವಿಗೆ "ಗುರುಲಿಂಗಯ್ಯ" ಎಂದು ಕರೆಯುತ್ತಾರೆ. ಮಗು ನಿಜಕ್ಕೂ ಗುರುಲಿಂಗಯ್ಯವೇ ಆಗಿತ್ತು. ಅಂದಿನ ಅಥಣಿಯ ಗಚ್ಚಿನ ಮಠದಲ್ಲಿ ಮರುಳ ಶಂಕರ ಶಿವಯೋಗಿಗಳು ಮಠಾಧೀಶರಾಗಿದ್ದಾಗ ಈ ಮಗುವನ್ನು ಅವರ ಉಡಿಯಲ್ಲಿ ಹಾಕುತ್ತಾರೆ. ಅವರ ಮಾರ್ಗದರ್ಶನದಲ್ಲಿಯೇ ಮಗು ಬೆಳೆಯುತ್ತದೆ. ತೆಲಸಂಗದ ಬಸವಲಿಂಗದೇವರು ಎಂಬ ಗುರುವಿನಿಂದ ವಿದ್ಯಾಭ್ಯಾಸ ಪಡೆಯುತ್ತಿರುವಾಗ ಬಾಲಕನಾಗಿದ್ದಾಗಲೇ ಶರಣರ ಚಿಂತನೆಗಳನ್ನು ಮೈಗೂಡಿಸಿಕೊಂಡಿದ್ದ ಗುರುಲಿಂಗಯ್ಯ ಶರಣತ್ವದ ಬದುಕಿಗೆ ವಾಲಿಕೊಳ್ಳುತ್ತಾರೆ. ಅಪಾರ ಜ್ಞಾನಿಯಾಗಿದ್ದ ಬಾಲಕ ಕ್ರಿ.ಶ. ೧೮೪೪ ರಿಂದ ೧೮೫೨ರ ವರೆಗೆ ಸಂಸ್ಕೃತ ಮತ್ತು

ಶಾಸ್ತ್ರಗಳನ್ನು ಅಧ್ಯಯನ ಮಾಡುತ್ತಾರೆ. ಇದೇ ಸಂದರ್ಭದಲ್ಲಿ ಅಂದು ಅಥಣಿಯಲ್ಲಿದ್ದ ಗುರುಶಾಂತಯೋಗಿಗಳಿಂದ ಬಸವಣ್ಣನವರ ಷಟ್‌ಸ್ಥಲ ಸಿದ್ಧಾಂತದ ಉಪದೇಶ ಪಡೆಯುತ್ತಾರೆ. ಇದರ ಪರಿಣಾಮವೆಂಬಂತೆ ಪ್ರತಿದಿವಸ ಇಷ್ಟಲಿಂಗ ಪೂಜೆ ಮಾಡಿಕೊಳ್ಳುತ್ತ ಶಿವಯೋಗ ಸಾಧನೆ ಮಾಡುತ್ತಾರೆ.

ಶಿವಯೋಗ ಸಾಧನೆ ಎಂದರೆ ಅದು ಕರ್ಮ ಯೋಗದಿಂದ ಕಾಯಕ ಯೋಗಿಯಾಗಿ ಕಾಯಕ ಯೋಗಿಯಿಂದ ಶಿವಯೋಗಿಯಾಗಿ ಪರಿವರ್ತನೆಯಾದ ಹನ್ನೆರಡನೇ ಶತಮಾನದ ಶಿವಯೋಗಿ ಸಿದ್ಧರಾಮನ ಶಿವಯೋಗ ಸಾಧನೆಯಂತಿತ್ತು. ಇದರಿಂದಾಗಿ ಇವರಿಗೆ ಸಹಜವಾಗಿಯೇ ಸ್ವ ನಿಯಂತ್ರಣ ಮತ್ತು ಏಕಾಗ್ರತೆಗೆ ಈ ಸಾಧನೆಯು ಸಹಕಾರಿಯಾಯಿತು. ಇಷ್ಟಲಿಂಗ ಪೂಜೆಯನ್ನು ಮಾಡಿಕೊಳ್ಳುತ್ತಿದ್ದಾಗ ಅವರೊಳಗಿರುವ ದೇವ ಇವರು ಪೂಜಿಸಿಕೊಳ್ಳುವುದನ್ನು ಮತ್ತು ಪ್ರತಿ ದಿವಸದ ಇವರ ನಡೆಯನ್ನು ಕಂಡು ಅಹುದಹುದೆನ್ನುವ ಪ್ರಜ್ಞೆ ಇವರಿಗೆ ಅರಿವಿಗೆ ಬರುವವರೆಗೆ ಇಷ್ಟಲಿಂಗ ಪೂಜೆಯನ್ನು ಮಾಡಿಕೊಳ್ಳುತ್ತಿದ್ದರು. ಹೀಗಾಗಿಯೇ ಶಿವಯೋಗಿಗಳು ಮೊದಲು ತಮ್ಮ ಅಂತರಂಗವನ್ನು ತಾವು ದರ್ಶಿಸಿಕೊಳ್ಳಲು ಅಂತರಂಗ ಸಾಧನೆಯನ್ನು ಅನುಭಾವಿಕ ನೆಲೆಯಲ್ಲಿ ಮಾಡಿಕೊಳ್ಳುತ್ತಾರೆ. ಹಾಗೆ ಮಾಡಿಕೊಂಡವರು ಬಸವಣ್ಣನ ರೀತಿಯಲ್ಲಿ ಬಹಿರಂಗಕ್ಕೆ ಬರುತ್ತಾರೆ. ಅಂದರೆ ಬಹಿರಂಗದ ಜೀವ ದೇವರುಗಳೊಡನೆ ತಮ್ಮನ್ನು ಸಮೀಕರಿಸಿಕೊಳ್ಳಲು ಆರಂಭಿಸುತ್ತಾ ಸಕಲ ಜೀವಿಗಳಿಗೆ ಲೇಸ ಬಯಸಲು ಸಹಕಾರಿಯಾಗುವಂತೆ ಪ್ರಾಯೋಗಿಕವಾಗಿ ಜಂಗಮ ಸೇವೆಗೆ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಾರೆ. ಇದು ಅವರ ಬಹಿರಂಗದ ಸಾಧನೆಯನ್ನು ಗುರುತಿಸಲು ಸಾಧ್ಯವಾಗುತ್ತದೆ.

ಬಸವಣ್ಣನವರು ತಿಳಿಸಿದಂತೆ ಈ ಮಾದರಿಯಲ್ಲಿ ಅವರು ಆಧ್ಯಾತ್ಮದ ನೆಲೆಯಲ್ಲಿ ಅಂತರಂಗ ಮತ್ತು ಬಹಿರಂಗ ಶುದ್ಧತೆಯನ್ನು ಮಾಡಿಕೊಳ್ಳುವುದಲ್ಲದೇ ಅಂತರಂಗ ಮತ್ತು ಬಹಿರಂಗದ ಸಾಧನೆಯನ್ನು ಸಹ ಸಾಧಿಸಿ ತೋರಿಸಿದವರು. ಅವರ ಸಾಧನೆಗಳನ್ನು ಅವರ ಪವಾಡ ಸದೃಶ್ಯ ಘಟನೆಗಳನ್ನು ಅಥಣಿಯ ಸುತ್ತಮುತ್ತಲಿನ ಜನರ ಮನದಲ್ಲಿ ಇಂದಿಗೂ ನಲಿದಾಡುತ್ತಿರುವುದನ್ನು ಕೇಳುತ್ತೇವೆ, ನೋಡುತ್ತೇವೆ. ಹುಬ್ಬಳ್ಳಿಯ ಸಿದ್ಧಾರೂಢರ, ನವಲಗುಂದದ ನಾಗಲಿಂಗರ, ಗರಗದ ಮಡಿವಾಳಪ್ಪರ, ಶಿಶುನಾಳ ಶರೀಪರ, ಮೃತ್ಯುಂಜಯ ಅಪ್ಪಗಳ, ಬಂಥನಾಳ ಸಂಗನಬಸವ ಸ್ವಾಮಿಗಳ ಹಾಗೂ ಬಿಳೂರು ಅಪ್ಪಗಳ ಸಮಕಾಲೀನರಾಗಿ ಚಿತ್ರದುರ್ಗದ ಮುರಘಾ ಪರಂಪರೆಯ ಕೊಂಡಿಯಾಗಿ ಅಥಣಿಯ ಮಠದ ಪೂರ್ವಜರ ಪರಂಪರೆಯ ದಿಕ್ಕನ್ನೇ ಬದಲಿಸಿ ಆ ಮಠವನ್ನು ಅನುಭವ ಮಂಟಪವನ್ನಾಗಿಸಿ ಜನಮಾನಸದಲ್ಲಿ ಬಸವಾನುಯಾಯಿಗಳಾಗಿ ನೆಲೆಗೊಂಡವರು ಅಥಣಿಯ ಶಿವಯೋಗಿಗಳು. ಅದಕ್ಕಾಗಿಯೇ ಇವರನ್ನು ೧೯ನೇ ಶತಮಾನದ ಬಸವಣ್ಣ ಎನ್ನುವುದು ಸೂಕ್ತವೆನಿಸುತ್ತದೆ. ಇಂಥವರ ಮೂಲಕ ಬಸವಣ್ಣ ಮತ್ತೇ ಮತ್ತೇ ಪ್ರಸ್ತುತವಾಗುತ್ತಿರುತ್ತಾನೆ. ಇಂಥವರು ಬೆಳೆಸಿದ ಮಠಗಳು ಅನುಭವ ಮಂಟಪಗಳಾಗಿ ಈ ನಾಡು ಮತ್ತೇ ಮತ್ತೇ ಕಲ್ಯಾಣವಾಗಲು ಸಾಧ್ಯವಾಗುತ್ತಲಿದೆ.

ಬಸವಣ್ಣನವರ ಪ್ರಕಾರ ಸಾಧಕನಾದವನು ತಾನೊಬ್ಬನೇ ಲಿಂಗವಂತನಾಗಿ, ತಾನೊಬ್ಬನೇ ಭಕ್ತನಾಗಿ, ತಾನೊಬ್ಬನೇ ಶರಣನಾಗುಳಿದುಬಿಡುವುದಲ್ಲ. ತನ್ನಂತೆ ಹಲವರನ್ನು ಭಕ್ತರನ್ನಾಗಿಸುವುದು, ಹಲವರನ್ನು ಶರಣರನ್ನಾಗಿಸುವುದು ಮತ್ತು ಅವರೊಡನೆ ಶರಣ ಪರಂಪರೆಯನ್ನು ಬೆಳೆಸುವ ಮೂಲಕ ಕಲ್ಯಾಣ ನಾಡಿನ ವ್ಯವಸ್ಥೆಯಲ್ಲಿ ಶರಣ ಸಂಕುಲವನ್ನು ಬೆಳೆಸಬೇಕೆಂಬಂತೆ ಅಥಣಿಯ



ಶಿವಯೋಗಿಗಳು ವ್ಯಕ್ತಿ ಕಲ್ಯಾಣದೊಂದಿಗೆ ಲೋಕ ಕಲ್ಯಾಣಕ್ಕಾಗಿ ದೇಶ ಸಂಚಾರವನ್ನು ಕೈಕೊಳ್ಳುತ್ತಾರೆ. ವ್ಯಕ್ತಿ ಕಲ್ಯಾಣವಾಗಬೇಕಾದರೆ ಲೋಕಾನುಭವವೂ ಬೇಕಾಗುತ್ತದೆ. ವ್ಯಕ್ತಿ ಕಲ್ಯಾಣದಿಂದ ಅಂತರಂಗ ಬಸವಮಯವಾದರೆ ಲೋಕ ಕಲ್ಯಾಣದಿಂದ ಸರ್ವದರಲ್ಲಿಯೂ ಲಿಂಗತತ್ವವನ್ನು ಕಾಣುವುದಾಗಿದೆ ಎಂಬುದು ಅವರ ನಂಬಿಕೆ. ಅದಕ್ಕಾಗಿಯೇ ಕ್ರಿ.ಶ. ೧೮೫೬ ರಿಂದ ೧೮೬೮ರ ವರೆಗೆ ದೇಶ ಸಂಚಾರ ಕೈಗೊಳ್ಳುತ್ತಾರೆ. ಹಳ್ಳಿಗಳಲ್ಲಿ ಒಂದು ದಿವಸ, ಪಟ್ಟಣಗಳಲ್ಲಿ ಮೂರ್ನಾಲ್ಕು ದಿವಸದಂತೆ ಯೋಜನೆಯನ್ನು ಹಾಕಿಕೊಂಡು ಹೊರಟಾಗ ಇವರ ಮಾತುಗಳನ್ನು, ಉಪನ್ಯಾಸವನ್ನು, ಪುರಾಣವನ್ನು ಮತ್ತು ಅನುಭಾವಿಕ ಸಂದೇಶಗಳನ್ನು ಆಲಿಸಿ ಮೈಗೂಡಿಸಿಕೊಳ್ಳಲು ಸಾಗರೋಪಾದಿಯಲ್ಲಿ ಜನ ಸೇರುತ್ತಿದ್ದರಂತೆ. ಹೀಗೆ ಶಿವಯೋಗಿಗಳು ಹೋದಲೆಲ್ಲ ವಿನೂತನ ಅನುಭವಗಳು, ವಿನೂತನ ಘಟನೆಗಳು ಅವರ ಬದುಕಿನಲ್ಲಿ ಘಟಿಸುತ್ತಿದ್ದವು.

ಗುಹೇಶ್ವರ ಗುಡ್ಡದಲ್ಲಿ ಆರು ವರ್ಷ ಶಿವಯೋಗ ಸಾಧನೆ ಮಾಡುತ್ತಿದ್ದಾಗ ಅಲ್ಲಿ ಸಹಜವಾಗಿ ಹಾವು-ಚೇಳುಗಳು ಹರಿದಾಡುತ್ತಿರುವದನ್ನು ಕಂಡ ಜನರು ಶಿವಯೋಗಿಗಳಿಗೆ ಎಚ್ಚರದಿಂದಿರಿ ಎಂದು ಹೇಳಿದಾಗ ಅವುಗಳಲ್ಲಿಯೂ ಆ ದೇವನಿದ್ದಾನೆ. ಅವು ಸಹ ನಮ್ಮೊಂದಿಗೆ ಬದುಕಬೇಕಲ್ಲವೇ ಎನ್ನುತ್ತಾ ಸಕಲ ಜೀವಿಗಳಿಗೂ ಲೇಸನ್ನೇ ಬಯಸೆಂದ ಬಸವಣ್ಣನ ಮಾತುಗಳಲ್ಲಿ ನಂಬಿಕೆ ಇಟ್ಟುಕೊಂಡು ಅವುಗಳೊಂದಿಗೆ ಯಾವುದೇ ಭಯ ಆತಂಕಗಳಿಲ್ಲದೇ ಬದುಕುತ್ತಿದ್ದರು. ಅವು ಇವರಿಗೆ ವಿನೀತವಾಗಿಯೇ ಇರುತ್ತಿದ್ದವು. ಹೀಗೆಯೇ ಅಡವಿ ಸ್ವಾಮಿ ಎಂಬ ಶರಣರನ್ನು ಕಾಣಲು ಅಂಕಲಗಿ ಎಂಬ ಊರಿಗೆ ಹೋಗುವಾಗ ಅದು ಸಂಪೂರ್ಣ ಅರಣ್ಯ ಪ್ರದೇಶವಾದ ಕಾರಣ ಅಲ್ಲೊಂದು ಹುಲಿ ಇವರಿಗೆ ಎದುರಾಯಿತಂತೆ, ಇವರ ಪ್ರಸನ್ನ ಮುಖಭಾವ ಮತ್ತು ನಿರಾಳತೆ ಕಂಡು ಆ ಹುಲಿಯೇ ಇವರಿಗೆ ನಮಿಸಿ, ಪಕ್ಕಕ್ಕೆ ಸರಿದು ಬೇರೆ ಮಾರ್ಗದಲ್ಲಿ ಸಾಗಿ ಹೋಯಿತಂತೆ. ಆಗ ತಮ್ಮ ಶಿಷ್ಯರಿಗೆ ಶಿವಯೋಗಿಗಳು ಹೇಳಿದ ಸಂದೇಶವೆಂದರೆ "ಸಾತ್ವಿಕತೆಯ ಮುಂದೆ ತಾಮಸದ ಆಟ ನಡೆಯದು" ಎಂದು ಅವರ ಈ ಸಂದೇಶ ಎಷ್ಟು ಪ್ರಸ್ತುತ ಅಲ್ಲವೇ? ಇಂದಿಗೂ ಸಾತ್ವಿಕ ವ್ಯಕ್ತಿಗಳ ವಿರುದ್ಧ ಏನಾದರೂ ಮಾತನಾಡುವುದಾಗಲೀ, ಕೆಟ್ಟದ್ದಾಗಿ ನಡೆದುಕೊಳ್ಳುವುದಾಗಲೀ ತಾಮಸದ ಗುಣವುಳ್ಳವರಿಂದಲೂ ಸಾಧ್ಯವಾಗದು. ಇದು ಶಿವಯೋಗಿಗಳ ಬುದ್ಧನಂಥ ಸಾತ್ವಿಕದ ವ್ಯಕ್ತಿತ್ವವಾಗಿತ್ತು.

ಹೀಗೆ ಅವರು ದೇಶ ಸಂಚಾರ ಮಾಡುವಾಗ ಅಪಾರ ಅನುಭವಗಳನ್ನು ಅನುಭಾವಿಸಿಕೊಂಡು ತಮ್ಮ ಆದ್ಯಾತ್ಮ ಮತ್ತು ಬಸವಾದಿ ಪ್ರಮಥರ ಚಿಂತನೆಗಳನ್ನು, ವಚನಗಳನ್ನು ಮತ್ತು ಬದುಕಿನ ಸತ್ಯಗಳನ್ನು ಮನಮುಟ್ಟುವಂತೆ ತಮ್ಮ ಉಪನ್ಯಾಸದಲ್ಲಿ ಹೇಳುತ್ತಿದ್ದರೆ, ಪುರಾಣ ರೂಪದಲ್ಲಿ ಚಿಂತನೆಯನ್ನು ಮಾಡುತ್ತಿದ್ದರೆ ನೆರೆದವರ ಅನುಭವಕ್ಕಷ್ಟೇ ಅಲ್ಲ ಅದು ಅವರ ಮನದೊಳಗೇ ಸ್ವತಹ ಅನುಭಾವವಾಗಿ ಪರಿಣಾಮವಾಗುತ್ತಿತ್ತಂತೆ. ಇದು ಸಹಜ ಎಲ್ಲಿ ನಡೆ ಇದ್ದು ನುಡಿಯಾಗಿ ಹೊರಹೊಮ್ಮುತ್ತದೆಯೋ ಆ ನಡೆದ ನುಡಿಗೆ ಬಸವ ಮೌಲ್ಯ ಇರುತ್ತದೆ ಎಂಬಂತೆ ಶಿವಯೋಗಿಗಳದ್ದು ನಡೆದಾದ ನಂತರದ ನುಡಿಯಾಗಿರುತಿತ್ತು. ಹೀಗಾಗಿ ಅವರ ನುಡಿಗಳು ಜಂಗಮ ನುಡಿಗಳಾಗಿರುತ್ತಿದ್ದವು.

ನಿರಂತರ ಸಾಧನೆಯಿಂದ ಶಿವಯೋಗಿಗಳ ಬಹಿರಂಗದ ಸಾಧನೆ ವಿಸ್ತರಿಸುತ್ತಲೇ ಹೋಗುತಿತ್ತು. ಹೀಗಿರುವಾಗ ಅವರ ಗುರುಗಳಾದ ಮರುಳ ಶಂಕರದೇವ ಹಾಗು ಗುರುಶಾಂತ ಸ್ವಾಮಿಗಳು ಲಿಂಗೈಕ್ಯರಾದ ವಿಷಯ ತಿಳಿಯುತ್ತದೆ. ಆ ಸಂದರ್ಭದಲ್ಲಿ ಶಿವಯೋಗಿಗಳು

ಅಥಣಿಗೆ ಬಂದಾಗ ಚೆನ್ನಬಸವ ಸ್ವಾಮಿಗಳು ಮಠದ ಅಧಿಕಾರ ವಹಿಸಿಕೊಳ್ಳುವಂತೆ ಕೇಳುತ್ತಾರಂತೆ ಆಗ ಇವರು ಹೇಳಿದ್ದೇನೆಂದರೆ, "ಮಠದ ಅಧಿಕಾರ ನನಗೆ ಬೇಡ, ಗುರುಗಳ ಸೇವೆ ಸಾಕೆನಗೆ" ಎಂಬ ವಿನಮ್ರ ನಿಲುವಿನ ವಿನಂತಿ ಮಾಡುತ್ತಾರಂತೆ. ಇಲ್ಲಿ ಗುರುಗಳೆಂದರೆ ಅವರ ಗುರುಗಳು ಒಂದರ್ಥದಲ್ಲಿಯಾದರೆ, ಇನ್ನೊಂದರ್ಥದಲ್ಲಿ ಅವರ ಗುರುಗಳೆಂದರೆ ಸಕಲ ಜೀವಿಗಳಲ್ಲಿರುವ ಆ ದೇವನೇ ಆಗಿದ್ದಾನೆ. ಸಕಲ ಜೀವಿಗಳಲ್ಲಿಯ ಆ ದೇವನೆಂಬ ಗುರುಗಳ ಸೇವೆ ಮಾಡುವ ಅವಕಾಶ ಸಿಕ್ಕರೆ ಸಾಕೆನಗೆ ಎಂಬ ಭಾವ ಅಲ್ಲಿತ್ತು. ಅವರಲ್ಲಿ ಎಂಥ ವಿನೀತ ಶರಣತ್ವದ ಭಾವವಿದೆ ಎಂಬುದನ್ನು ಗಮನಿಸಿಬೇಕಿದೆ. ಅನಂತರ ಕ್ರಿ.ಶ. ೧೮೮೨ ರಿಂದ ಅಥಣಿಯ ಗಚ್ಚಿನ ಮಠದಲ್ಲಿಯೇ ಉಳಿದುಕೊಂಡು ಶಿವಯೋಗ ಸಾಧನೆಯನ್ನು ಮಾಡಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಅಲ್ಲಿಯ ಶಿವಯೋಗ ಮಂಟಪ, ಸುತ್ತಲಿನ ಸ್ಥಳದ ಕಸ ಗುಡಿಸುವುದು, ಹೊರಗಿದ್ದ ಭಾವಿಯಿಂದ ನೀರು ತಂದು ಸ್ವಚ್ಛಗೊಳಿಸುವ ಕಾಯಕ ಮಾಡಿಕೊಳ್ಳುವುದು, ತಮ್ಮ ಬಟ್ಟೆಗಳನ್ನು ತಾವೇ ಶುಭ್ರವಾಗಿಸಿಕೊಂಡು ಸ್ನಾನಾದಿ ಮುಗಿಸಿಕೊಂಡು ತಮ್ಮ ಎಲ್ಲಾ ಕೆಲಸವನ್ನು ತಾವೇ ಮಾಡಿಕೊಳ್ಳುವುದಷ್ಟೇ ಅಲ್ಲ ಸಾಧ್ಯವಾದಷ್ಟು ಬಹಿರಂಗದ ಕಾಯಕ ಸೇವೆ ಮಾಡಿಕೊಂಡು ವಚನ ಪಠಣ ಮತ್ತಿತರ ಅನುಭವ ಚಿಂತನೆಗಳನ್ನು ಪ್ರತಿನಿತ್ಯ ಪಾಲಿಸಿ ನಂತರ ಮೌನಾಚರಣೆಯನ್ನು, ಯೋಗನಿದ್ರೆಯನ್ನು ಮಾಡುತ್ತಿದ್ದವರು.

ಬಸವಣ್ಣ ಮತ್ತು ಶಿವಶರಣರ ವಚನಗಳೆಂದರೆ ಶಿವಯೋಗಿಗಳಿಗೆ ಪಂಚಪ್ರಾಣ. ವಚನಕಾರರ ಮೇಲೆ ಅಪಾರ ಗೌರವ. ಅವರು ನುಡಿದಂತೆ ನಡೆದಂತೆ ಜಂಗಮಗೊಂಡಂತೆ ತಾವು ಅವರ ಪಥಿಕರಾಗಬೇಕೆಂಬುದೇ ಶಿವಯೋಗಿಗಳ ನಿಲುವು. ವಚನಗಳನ್ನು ಬಸವಾದಿ ಪ್ರಮಥರನ್ನು ಜನಮಾನಸದಲ್ಲಿ ಮತ್ತೇ ಮತ್ತೇ ಉಸಿರಾಡುವಂತೆ ಮಾಡುವ ಮಹಾತ್ವಾಕಾಂಕ್ಷೆಯಿಂದ ಕ್ರಿ.ಶ. ೧೮೯೦ರಲ್ಲಿ "ಶಿವಾನುಭವ ಪತ್ರಿಕೆ" ಎಂಬ ವಚನ ಸಾಹಿತ್ಯಕ್ಕೆ ಮತ್ತು ಅನುಭಾವದ ಬರಹಗಳಿಗೆ ಮೀಸಲಾಗಿರುವ ಒಂದು ಪತ್ರಿಕೆಯನ್ನು ಆರಂಭಿಸುತ್ತಾರೆ. ಇದೇ ಸಂದರ್ಭದಲ್ಲಿ ವಚನ ಪಿತಾಮಹ ಫ.ಗು. ಹಳಕಟ್ಟಿ ಅವರ ಸಾಧನೆಗೆ ಪ್ರೇರಣೆಯಾಗಿ ನಿಂತು ಹಲವಾರು ವಚನಸಾಹಿತ್ಯ ಪ್ರಕಾರಗಳನ್ನು ಪ್ರಕಟಿಸಲು ಕ್ರಮವಹಿಸುತ್ತಾರೆ. ಕ್ರಿ.ಶ. ೧೮೯೮ರಲ್ಲಿ ಅಥಣಿಯಲ್ಲಿ ನಡೆದ ವೀರಶೈವ ಸಭೆಯಲ್ಲಿ ವಚನ ಸಾಹಿತ್ಯ ಪ್ರಕಟಣೆ ಮತ್ತು ಸಂಪಾದನೆಗೆ ಹಲವಾರು ಯೋಜನೆಗಳನ್ನು ರೂಪಿಸಿ ಪ್ರೇರಣೆ ನೀಡುತ್ತಾರೆ. ಕ್ರಿ.ಶ. ೧೯೦೧ರಲ್ಲಿ ಅಥಣಿಯಲ್ಲಿ ನಡೆದ ಪ್ರಥಮ ವೀರಶೈವ ಸಾಹಿತ್ಯ ಸಮ್ಮೇಳನ ನಡೆದಾಗ ಇದರ ನೇತೃತ್ವವನ್ನು ವಹಿಸಿ ಯಶಸ್ವಿಗೊಳಿಸುತ್ತಾರೆ.

ಶಿವಯೋಗಿಗಳು ಕ್ರಿ.ಶ. ೧೯೧೮ರಲ್ಲಿ ಹರ್ಡೇಕರ ಮಂಜಪ್ಪನವರಿಗೆ ಹಲವಾರು ವಿರೋಧಗಳ ನಡುವೆ ಇಷ್ಟಲಿಂಗ ಧೀಕ್ಷೆಯ ಸಂಸ್ಕಾರವನ್ನು ನೀಡುತ್ತಾರೆ. ಮೊದಲೇ ಆಂತರ್ಯದಲ್ಲಿ ಲಿಂಗವಂತರಾಗಿದ್ದ ಹರ್ಡೇಕರ ಮಂಜಪ್ಪನವರು ಈ ಶಿವಯೋಗಿಗಳ ಸಂಸರ್ಗದಿಂದ ಬಹಿರಂಗದಲ್ಲಿಯೂ ಲಿಂಗಾಯತರೆನಿಸಿಕೊಳ್ಳುತ್ತಾರೆ. ಈ ಮಂಜಪ್ಪನವರು ಮುಂದಿನ ದಿನಗಳಲ್ಲಿ ಒಂದೆಡೆ ಬಸವಣ್ಣನವರನ್ನು ಒಂದೆಡೆ ಗಾಂಧೀಜಿಯವರನ್ನು ತಮ್ಮೊಂದಿಗೆ ಅನುಭಾವಿಸಿಕೊಂಡು ಸತ್ಯಾಗ್ರಹ, ಅಹಿಂಸೆ, ಗ್ರಾಮೋದ್ಯೋಗ, ಖಾದಿ ಪ್ರಚಾರ, ರಾಷ್ಟ್ರೀಯ ಆಂದೋಲನ ಮುಂತಾದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಪೂರಕವಾದ ಕಾಯಕದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಕರ್ನಾಟಕದ ಗಾಂಧೀಜಿ ಎಂದು ಗುರುತಿಸಿಕೊಳ್ಳುವಷ್ಟು ಪ್ರಭಾವಿತರಾಗಿ ತಮ್ಮ ಪಥದಲ್ಲಿ ಸಾಗುತ್ತಾರೆ. ಈ ಪ್ರತಿ ಸಂದರ್ಭದಲ್ಲಿಯೂ ಅವರು ಅಥಣಿಯ



ಶಿವಯೋಗಿಗಳನ್ನೇ ತಮ್ಮ ಹೃನ್ಮನದಲ್ಲಿ ನೆನೆಯುತ್ತಾ ಪ್ರೇರೇಪಣೆಗೊಳ್ಳುತ್ತಿದ್ದರು. ಇದೇ ಸಂದರ್ಭದಲ್ಲಿ ಅಂದರೆ ಕ್ರಿ.ಶ. ೧೯೧೮ರಲ್ಲಿ ಬಸವ ಜಯಂತಿಯನ್ನು ಅರ್ಥಪೂರ್ಣವಾಗಿ ನಡೆಸಲು ಹರ್ಡೇಕರ ಮಂಜಪ್ಪನವರ ಮೂಲಕ ಪ್ರೇರಣೆ ನೀಡಿದವರು ಅಥಣಿಯ ಶಿವಯೋಗಿಗಳೇ.

ಒಂದೆಡೆ ಇಡೀ ದೇಶದ ಸ್ವಾತಂತ್ರ್ಯಕ್ಕಾಗಿ ಸಂಗ್ರಾಮದ ಮಾದರಿಯಲ್ಲಿ ಹೋರಾಟ ನಡೆಯುತ್ತಿದ್ದಾಗ ಸ್ವಾತಂತ್ರ ಹೋರಾಟಗಾರರಾಗಿದ್ದ ಬಾಲ ಗಂಗಾಧರ ತಿಲಕರು ಶಿವಯೋಗಿಗಳನ್ನು ಭೆಟ್ಟಿಯಾಗುವ ಸಂದರ್ಭ ಬರುತ್ತದೆ. ಆಗ ತಿಲಕರು "ಸ್ವಾಮೀಜಿ ಈ ದೇಶಕ್ಕೆ ಸ್ವಾತಂತ್ರ್ಯ ಬರುವುದೇ?" ಎಂದು ಕೇಳಿದಾಗ ಸ್ವಾತಂತ್ರ್ಯ ಬರುವುದು ಆದರೆ ಆಗ ನೀನೇ ಇರುವುದಿಲ್ಲವಲ್ಲಪ್ಪಾ ಎಂದಾಗ "ಈ ದೇಶಕ್ಕೆ ಸ್ವಾಂತಂತ್ರ್ಯ ಬರುವುದು ಮುಖ್ಯ ನಾನಿರುವುದು ಮುಖ್ಯವಲ್ಲ" ಎಂದು ಪ್ರತಿಕ್ರಿಯಿಸಿದ ಬಾಲಗಂಗಾಧರ ತಿಲಕರು ಅಂದಿನಿಂದ ತಮ್ಮ ಪ್ರಾಣದ ಮೇಲಿನ ಹಂಗನ್ನು ತೊರೆದು ಮತ್ತಷ್ಟು ಪರಿಣಾಮಕಾರಿಯಾಗಿ ದೇಶದ ಸ್ವಾತಂತ್ರ್ಯಕ್ಕಾಗಿ ಯೋಜನೆಗಳನ್ನು ರೂಪಿಸುತ್ತಾರೆ. ದೇಶಕ್ಕೆ ಸ್ವಾತಂತ್ರ್ಯ ಬಂದಾಗ ಶಿವಯೋಗಿಗಳ ಮಾತು ನಿಜವಾಗಿತ್ತು. ಸ್ವಾತಂತ್ರ್ಯ ಹೋರಾಟಕ್ಕಾಗಿ ಮುಡಿಪಾಗಿದ್ದ ಬಾಲಗಂಗಾಧರ ತಿಲಕರು ಬದುಕಿರಲಿಲ್ಲ. ಇಂಥ ಅದೆಷ್ಟೋ ಸ್ವಾತಂತ್ರ್ಯ ಹೋರಾಟಗಾರರನ್ನು ಶಿವಯೋಗಿಗಳ ತಮ್ಮ ಮಾತಿನಿಂದ ರೂಪಗೊಳಿಸಿದ್ದರು. ಈ ಅಂಶವನ್ನು ಗಮನಿಸಿದರೆ ಶಿವಯೋಗಿಗಳು ಒಂದರ್ಥದಲ್ಲಿ ಈ ನಾಡಿನ ಸ್ವಾತಂತ್ರಕ್ಕಾಗಿ ಮತ್ತು ಈ ನಾಡಿನ ಕಲ್ಯಾಣಕ್ಕಾಗಿ ವಿಶಿಷ್ಟ ಬಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಪರಿಯನ್ನು ಇಂದಿನ ಭಾರತೀಯರು ಅರಿಯಬೇಕಿದೆ. ಹನ್ನೆರಡನೇ ಶತಮಾನದ ಬಸವಣ್ಣನವರು ಶಿವಯೋಗಿಗಳ ಮೂಲಕ ಈ ನಾಡನ್ನು ಮತ್ತೇ ಕಲ್ಯಾಣ ಮಾಡಿಸಿರಬಹುದೇನೋ? ಎಂದೆನಿಸುತ್ತದೆ.

ಇಂದಿನ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಸಾವಳಗಿಯಲ್ಲಿ ದಾನಪ್ಪ ಜತ್ತಿ ಎಂಬ ಕಿರಾಣಿ ವ್ಯಾಪಾರಿಯೊಬ್ಬರು ಇದ್ದರು. ಇವರು ಅಥಣಿ ಶಿವಯೋಗಿಗಳ ಮಠದ ಪರಮ ಭಕ್ತರು. ಇವರ ಮಗ ಬಸಪ್ಪ. ದಾನಪ್ಪನವರಿಗೆ ತಮ್ಮ ಮಗ ಬಸಪ್ಪನ ಕುರಿತು ಒಂಥರಾ ಆತಂಕ. ಸ್ವಾಮಿಗಳ ಹತ್ತಿರ ಬಂದಾಗೊಮ್ಮೆ ನನ್ನ ಮಗ ಏನು ಮಾಡ್ತಾನೆ ಗೊತ್ತಿಲ್ಲ. ಅಂವ ಉಂಡಾಡಿ ಉಂಡ ಅವನ ಬಗೆಗೆ ನನಗೆ ಚಿಂತೆ ಇದೆ, ಏನು ಮಾಡಬೇಕು ಸ್ವಾಮಿ ಎಂದು ಕೇಳಿದಾಗ "ದಾನಪ್ಪ ನೀ ಚಿಂತಿಸಬೇಡ ನಿನ್ನ ಮಗ ಮುಂದೆ ಈ ರಾಜ್ಯ ಆಳ್ತಾನಪ್ಪ" ಎಂದಿದ್ದರಂತೆ. ಅವರ ಮಾತು ಅಕ್ಷರಶಃ ನಿಜವಾಗಿದ್ದು ತಮಗೆಲ್ಲ ತಿಳಿದಿದೆ. ಈ ಬಸಪ್ಪನವರೇ ಮುಂದೆ ಬಿ.ಡಿ. ಜತ್ತಿಯಾಗಿ ಜಮಖಂಡಿಯ ಸಂಸ್ಥಾನದ ಮುಖ್ಯ ಮಂತ್ರಿಯಾಗಿ, ಕರ್ನಾಟಕದ ಮುಖ್ಯ ಮಂತ್ರಿಯಾಗಿ ನಂತರ ಭಾರತ ಸರ್ಕಾರದಲ್ಲಿ ಉಪರಾಷ್ಟ್ರಪತಿಗಳಾಗಿ, ಹಂಗಾಮಿ ರಾಷ್ಟ್ರಪತಿಗಳಾಗಿ, ಕೇಂದ್ರ ಸರ್ಕಾರದ ವಿವಿಧ ಹುದ್ದೆಯಲ್ಲಿ ಅಲಂಕರಿಸಿಕೊಂಡಿರುವುದನ್ನು ಅವರು ತಮ್ಮ ಹಣೆಯ ಮೇಲಿನ ವಿಭೂತಿಗಾಗಿ ಅಧಿಕಾರ ತ್ಯಜಿಸಲು ಸಿದ್ದರಿರುವುದು. ಬಸವಣ್ಣ ಮತ್ತು ಶರಣರ ವಚನ ಸಾಹಿತ್ಯ ಸೇವೆಗಾಗಿ ತಮ್ಮನ್ನು ತಾವು ಮುಡಿಪಾಗಿಟ್ಟುಕೊಂಡಿದ್ದು. ಬಸವ ಸಮಿತಿಯನ್ನು ರಚಿಸಿ ರೂಪಿಸಿರುವುದು, ಕಿಲ್ಲೆ ಕಲ್ಯಾಣವನ್ನು ಬಸವಕಲ್ಯಾಣವನ್ನಾಗಿಸಿದ್ದು... ಹೇಳ್ತಾ ಹೋದರೆ ಅದೊಂದು ಪುಸ್ತಕವೇ ಆಗುತ್ತದೆ. ಏಕೆಂದರೆ ಅವರಿಗೆ ಅವರೇ ಮಾದರಿಯಾಗಿದ್ದರು. ಅವರ ಪುತ್ರ ಅರವಿಂದ ಜತ್ತಿಯವರ ನೇತೃತ್ವದಲ್ಲಿ ಇಂದಿಗೂ ಬಸವ ಸಮಿತಿಯಲ್ಲಿ ಬಸವಾದಿ ಶಿವಶರಣರ ಉಸಿರು ಜಂಗಮಗೊಳ್ಳುವಂತೆ ಮಾಡಿದ್ದೊಂದು

ಅಥಣಿಗೆ ಬಂದಾಗ ಚೆನ್ನಬಸವ ಸ್ವಾಮಿಗಳು ಮಠದ ಅಧಿಕಾರ ವಹಿಸಿಕೊಳ್ಳುವಂತೆ ಕೇಳುತ್ತಾರಂತೆ ಆಗ ಇವರು ಹೇಳಿದ್ದೇನೆಂದರೆ, "ಮಠದ ಅಧಿಕಾರ ನನಗೆ ಬೇಡ, ಗುರುಗಳ ಸೇವೆ ಸಾಕೆನಗೆ" ಎಂಬ ವಿನಮ್ರ ನಿಲುವಿನ ವಿನಂತಿ ಮಾಡುತ್ತಾರಂತೆ. ಇಲ್ಲಿ ಗುರುಗಳೆಂದರೆ ಅವರ ಗುರುಗಳು ಒಂದರ್ಥದಲ್ಲಿಯಾದರೆ, ಇನ್ನೊಂದರ್ಥದಲ್ಲಿ ಅವರ ಗುರುಗಳೆಂದರೆ ಸಕಲ ಜೀವಿಗಳಲ್ಲಿರುವ ಆ ದೇವನೇ ಆಗಿದ್ದಾನೆ. ಸಕಲ ಜೀವಿಗಳಲ್ಲಿಯ ಆ ದೇವನೆಂಬ ಗುರುಗಳ ಸೇವೆ ಮಾಡುವ ಅವಕಾಶ ಸಿಕ್ಕರೆ ಸಾಕೆನಗೆ ಎಂಬ ಭಾವ ಅಲ್ಲಿತ್ತು. ಅವರಲ್ಲಿ ಎಂಥ ವಿನೀತ ಶರಣತ್ವದ ಭಾವವಿದೆ ಎಂಬುದನ್ನು ಗಮನಿಸಿಬೇಕಿದೆ. ಅನಂತರ ಕ್ರಿ.ಶ. ೧೮೮೨ ರಿಂದ ಅಥಣಿಯ ಗಚ್ಚಿನ ಮಠದಲ್ಲಿಯೇ ಉಳಿದುಕೊಂಡು ಶಿವಯೋಗ ಸಾಧನೆಯನ್ನು ಮಾಡಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಅಲ್ಲಿಯ ಶಿವಯೋಗ ಮಂಟಪ, ಸುತ್ತಲಿನ ಸ್ಥಳದ ಕಸ ಗುಡಿಸುವುದು, ಹೊರಗಿದ್ದ ಭಾವಿಯಿಂದ ನೀರು ತಂದು ಸ್ವಚ್ಚಗೊಳಿಸುವ ಕಾಯಕ ಮಾಡಿಕೊಳ್ಳುವುದು, ತಮ್ಮ ಬಟ್ಟೆಗಳನ್ನು ತಾವೇ ಶುಭ್ರವಾಗಿಸಿಕೊಂಡು ಸ್ನಾನಾದಿ ಮುಗಿಸಿಕೊಂಡು ತಮ್ಮ ಎಲ್ಲಾ ಕೆಲಸವನ್ನು ತಾವೇ ಮಾಡಿಕೊಳ್ಳುವುದಷ್ಟೇ ಅಲ್ಲ ಸಾಧ್ಯವಾದಷ್ಟು ಬಹಿರಂಗದ ಕಾಯಕ ಸೇವೆ ಮಾಡಿಕೊಂಡು ವಚನ ಪಠಣ ಮತ್ತಿತರ ಅನುಭವ ಚಿಂತನೆಗಳನ್ನು ಪ್ರತಿನಿತ್ಯ ಪಾಲಿಸಿ ನಂತರ ಮೌನಾಚರಣೆಯನ್ನು, ಯೋಗನಿದ್ರೆಯನ್ನು ಮಾಡುತ್ತಿದ್ದವರು.

ಬಸವಣ್ಣ ಮತ್ತು ಶಿವಶರಣರ ವಚನಗಳೆಂದರೆ ಶಿವಯೋಗಿಗಳಿಗೆ ಪಂಚಪ್ರಾಣ. ವಚನಕಾರರ ಮೇಲೆ ಅಪಾರ ಗೌರವ. ಅವರು ನುಡಿದಂತೆ ನಡೆದಂತೆ ಜಂಗಮಗೊಂಡಂತೆ ತಾವು ಅವರ ಪಥಿಕರಾಗಬೇಕೆಂಬುದೇ ಶಿವಯೋಗಿಗಳ ನಿಲುವು. ವಚನಗಳನ್ನು ಬಸವಾದಿ ಪ್ರಮಥರನ್ನು ಜನಮಾನಸದಲ್ಲಿ ಮತ್ತೇ ಮತ್ತೇ ಉಸಿರಾಡುವಂತೆ ಮಾಡುವ ಮಹಾತ್ವಾಕಾಂಕ್ಷೆಯಿಂದ ಕ್ರಿ.ಶ. ೧೮೯೦ರಲ್ಲಿ "ಶಿವಾನುಭವ ಪತ್ರಿಕೆ" ಎಂಬ ವಚನ ಸಾಹಿತ್ಯಕ್ಕೆ ಮತ್ತು ಅನುಭಾವದ ಬರಹಗಳಿಗೆ ಮೀಸಲಾಗಿರುವ ಒಂದು ಪತ್ರಿಕೆಯನ್ನು ಆರಂಭಿಸುತ್ತಾರೆ. ಇದೇ ಸಂದರ್ಭದಲ್ಲಿ ವಚನ ಪಿತಾಮಹ ಫ.ಗು. ಹಳಕಟ್ಟಿ ಅವರ ಸಾಧನೆಗೆ ಪ್ರೇರಣೆಯಾಗಿ ನಿಂತು ಹಲವಾರು ವಚನಸಾಹಿತ್ಯ ಪ್ರಕಾರಗಳನ್ನು ಪ್ರಕಟಿಸಲು ಕ್ರಮವಹಿಸುತ್ತಾರೆ. ಕ್ರಿ.ಶ. ೧೮೯೮ರಲ್ಲಿ ಅಥಣಿಯಲ್ಲಿ ನಡೆದ ವೀರಶೈವ ಸಭೆಯಲ್ಲಿ ವಚನ ಸಾಹಿತ್ಯ ಪ್ರಕಟಣೆ ಮತ್ತು ಸಂಪಾದನೆಗೆ ಹಲವಾರು ಯೋಜನೆಗಳನ್ನು ರೂಪಿಸಿ ಪ್ರೇರಣೆ ನೀಡುತ್ತಾರೆ. ಕ್ರಿ.ಶ. ೧೯೦೧ರಲ್ಲಿ ಅಥಣಿಯಲ್ಲಿ ನಡೆದ ಪ್ರಥಮ ವೀರಶೈವ ಸಾಹಿತ್ಯ ಸಮ್ಮೇಳನ ನಡೆದಾಗ ಇದರ ನೇತೃತ್ವವನ್ನು ವಹಿಸಿ ಯಶಸ್ವಿಗೊಳಿಸುತ್ತಾರೆ.

ಶಿವಯೋಗಿಗಳು ಕ್ರಿ.ಶ. ೧೯೧೮ರಲ್ಲಿ ಹರ್ಡೇಕರ ಮಂಜಪ್ಪನವರಿಗೆ ಹಲವಾರು ವಿರೋಧಗಳ ನಡುವೆ ಇಷ್ಟಲಿಂಗ ಧೀಕ್ಷೆಯ ಸಂಸ್ಕಾರವನ್ನು ನೀಡುತ್ತಾರೆ. ಮೊದಲೇ ಆಂತರ್ಯದಲ್ಲಿ ಲಿಂಗವಂತರಾಗಿದ್ದ ಹರ್ಡೇಕರ ಮಂಜಪ್ಪನವರು ಈ ಶಿವಯೋಗಿಗಳ ಸಂಸರ್ಗದಿಂದ ಬಹಿರಂಗದಲ್ಲಿಯೂ ಲಿಂಗಾಯತರೆನಿಸಿಕೊಳ್ಳುತ್ತಾರೆ. ಈ ಮಂಜಪ್ಪನವರು ಮುಂದಿನ ದಿನಗಳಲ್ಲಿ ಒಂದೆಡೆ ಬಸವಣ್ಣನವರನ್ನು ಒಂದೆಡೆ ಗಾಂಧೀಜಿಯವರನ್ನು ತಮ್ಮೊಂದಿಗೆ ಅನುಭಾವಿಸಿಕೊಂಡು ಸತ್ಯಾಗ್ರಹ, ಅಹಿಂಸೆ, ಗ್ರಾಮೋದ್ಯೋಗ, ಖಾದಿ ಪ್ರಚಾರ, ರಾಷ್ಟ್ರೀಯ ಆಂದೋಲನ ಮುಂತಾದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಪೂರಕವಾದ ಕಾಯಕದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಕರ್ನಾಟಕದ ಗಾಂಧೀಜಿ ಎಂದು ಗುರುತಿಸಿಕೊಳ್ಳುವಷ್ಟು ಪ್ರಭಾವಿತರಾಗಿ ತಮ್ಮ ಪಥದಲ್ಲಿ ಸಾಗುತ್ತಾರೆ. ಈ ಪ್ರತಿ ಸಂದರ್ಭದಲ್ಲಿಯೂ ಅವರು ಅಥಣಿಯ



ಶಿವಯೋಗಿಗಳನ್ನೇ ತಮ್ಮ ಹೃನ್ಮನದಲ್ಲಿ ನೆನೆಯುತ್ತಾ ಪ್ರೇರೇಪಣೆಗೊಳ್ಳುತ್ತಿದ್ದರು. ಇದೇ ಸಂದರ್ಭದಲ್ಲಿ ಅಂದರೆ ಕ್ರಿ.ಶ. ೧೯೧೮ರಲ್ಲಿ ಬಸವ ಜಯಂತಿಯನ್ನು ಅರ್ಥಪೂರ್ಣವಾಗಿ ನಡೆಸಲು ಹರ್ಡೇಕರ ಮಂಜಪ್ಪನವರ ಮೂಲಕ ಪ್ರೇರಣೆ ನೀಡಿದವರು ಅಥಣಿಯ ಶಿವಯೋಗಿಗಳೇ.

ಒಂದೆಡೆ ಇಡೀ ದೇಶದ ಸ್ವಾತಂತ್ರ್ಯಕ್ಕಾಗಿ ಸಂಗ್ರಾಮದ ಮಾದರಿಯಲ್ಲಿ ಹೋರಾಟ ನಡೆಯುತ್ತಿದ್ದಾಗ ಸ್ವಾತಂತ್ರ ಹೋರಾಟಗಾರರಾಗಿದ್ದ ಬಾಲ ಗಂಗಾಧರ ತಿಲಕರು ಶಿವಯೋಗಿಗಳನ್ನು ಭೆಟ್ಟಿಯಾಗುವ ಸಂದರ್ಭ ಬರುತ್ತದೆ. ಆಗ ತಿಲಕರು "ಸ್ವಾಮೀಜಿ ಈ ದೇಶಕ್ಕೆ ಸ್ವಾತಂತ್ರ್ಯ ಬರುವುದೇ?" ಎಂದು ಕೇಳಿದಾಗ ಸ್ವಾತಂತ್ರ್ಯ ಬರುವುದು ಆದರೆ ಆಗ ನೀನೇ ಇರುವುದಿಲ್ಲವಲ್ಲಪ್ಪಾ ಎಂದಾಗ "ಈ ದೇಶಕ್ಕೆ ಸ್ವಾಂತಂತ್ರ್ಯ ಬರುವುದು ಮುಖ್ಯ ನಾನಿರುವುದು ಮುಖ್ಯವಲ್ಲ" ಎಂದು ಪ್ರತಿಕ್ರಿಯಿಸಿದ ಬಾಲಗಂಗಾಧರ ತಿಲಕರು ಅಂದಿನಿಂದ ತಮ್ಮ ಪ್ರಾಣದ ಮೇಲಿನ ಹಂಗನ್ನು ತೊರೆದು ಮತ್ತಷ್ಟು ಪರಿಣಾಮಕಾರಿಯಾಗಿ ದೇಶದ ಸ್ವಾತಂತ್ರ್ಯಕ್ಕಾಗಿ ಯೋಜನೆಗಳನ್ನು ರೂಪಿಸುತ್ತಾರೆ. ದೇಶಕ್ಕೆ ಸ್ವಾತಂತ್ರ್ಯ ಬಂದಾಗ ಶಿವಯೋಗಿಗಳ ಮಾತು ನಿಜವಾಗಿತ್ತು. ಸ್ವಾತಂತ್ರ್ಯ ಹೋರಾಟಕ್ಕಾಗಿ ಮುಡಿಪಾಗಿದ್ದ ಬಾಲಗಂಗಾಧರ ತಿಲಕರು ಬದುಕಿರಲಿಲ್ಲ. ಇಂಥ ಅದೆಷ್ಟೋ ಸ್ವಾತಂತ್ರ್ಯ ಹೋರಾಟಗಾರರನ್ನು ಶಿವಯೋಗಿಗಳ ತಮ್ಮ ಮಾತಿನಿಂದ ರೂಪಗೊಳಿಸಿದ್ದರು. ಈ ಅಂಶವನ್ನು ಗಮನಿಸಿದರೆ ಶಿವಯೋಗಿಗಳು ಒಂದರ್ಥದಲ್ಲಿ ಈ ನಾಡಿನ ಸ್ವಾತಂತ್ರಕ್ಕಾಗಿ ಮತ್ತು ಈ ನಾಡಿನ ಕಲ್ಯಾಣಕ್ಕಾಗಿ ವಿಶಿಷ್ಟ ಬಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಪರಿಯನ್ನು ಇಂದಿನ ಭಾರತೀಯರು ಅರಿಯಬೇಕಿದೆ. ಹನ್ನೆರಡನೇ ಶತಮಾನದ ಬಸವಣ್ಣನವರು ಶಿವಯೋಗಿಗಳ ಮೂಲಕ ಈ ನಾಡನ್ನು ಮತ್ತೇ ಕಲ್ಯಾಣ ಮಾಡಿಸಿರಬಹುದೇನೋ? ಎಂದೆನಿಸುತ್ತದೆ.

ಇಂದಿನ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಸಾವಳಗಿಯಲ್ಲಿ ದಾನಪ್ಪ ಜತ್ತಿ ಎಂಬ ಕಿರಾಣಿ ವ್ಯಾಪಾರಿಯೊಬ್ಬರು ಇದ್ದರು. ಇವರು ಅಥಣಿ ಶಿವಯೋಗಿಗಳ ಮಠದ ಪರಮ ಭಕ್ತರು. ಇವರ ಮಗ ಬಸಪ್ಪ. ದಾನಪ್ಪನವರಿಗೆ ತಮ್ಮ ಮಗ ಬಸಪ್ಪನ ಕುರಿತು ಒಂಥರಾ ಆತಂಕ. ಸ್ವಾಮಿಗಳ ಹತ್ತಿರ ಬಂದಾಗೊಮ್ಮೆ ನನ್ನ ಮಗ ಏನು ಮಾಡ್ತಾನೆ ಗೊತ್ತಿಲ್ಲ. ಅಂವ ಉಂಡಾಡಿ ಉಂಡ ಅವನ ಬಗೆಗೆ ನನಗೆ ಚಿಂತೆ ಇದೆ, ಏನು ಮಾಡಬೇಕು ಸ್ವಾಮಿ ಎಂದು ಕೇಳಿದಾಗ "ದಾನಪ್ಪ ನೀ ಚಿಂತಿಸಬೇಡ ನಿನ್ನ ಮಗ ಮುಂದೆ ಈ ರಾಜ್ಯ ಆಳ್ತಾನಪ್ಪ" ಎಂದಿದ್ದರಂತೆ. ಅವರ ಮಾತು ಅಕ್ಷರಶಃ ನಿಜವಾಗಿದ್ದು ತಮಗೆಲ್ಲ ತಿಳಿದಿದೆ. ಈ ಬಸಪ್ಪನವರೇ ಮುಂದೆ ಬಿ.ಡಿ. ಜತ್ತಿಯಾಗಿ ಜಮಖಂಡಿಯ ಸಂಸ್ಥಾನದ ಮುಖ್ಯ ಮಂತ್ರಿಯಾಗಿ, ಕರ್ನಾಟಕದ ಮುಖ್ಯ ಮಂತ್ರಿಯಾಗಿ ನಂತರ ಭಾರತ ಸರ್ಕಾರದಲ್ಲಿ ಉಪರಾಷ್ಟ್ರಪತಿಗಳಾಗಿ, ಹಂಗಾಮಿ ರಾಷ್ಟ್ರಪತಿಗಳಾಗಿ, ಕೇಂದ್ರ ಸರ್ಕಾರದ ವಿವಿಧ ಹುದ್ದೆಯಲ್ಲಿ ಅಲಂಕರಿಸಿಕೊಂಡಿರುವುದನ್ನು ಅವರು ತಮ್ಮ ಹಣೆಯ ಮೇಲಿನ ವಿಭೂತಿಗಾಗಿ ಅಧಿಕಾರ ತ್ಯಜಿಸಲು ಸಿದ್ದರಿರುವುದು. ಬಸವಣ್ಣ ಮತ್ತು ಶರಣರ ವಚನ ಸಾಹಿತ್ಯ ಸೇವೆಗಾಗಿ ತಮ್ಮನ್ನು ತಾವು ಮುಡಿಪಾಗಿಟ್ಟುಕೊಂಡಿದ್ದು. ಬಸವ ಸಮಿತಿಯನ್ನು ರಚಿಸಿ ರೂಪಿಸಿರುವುದು, ಕಿಲ್ಲೆ ಕಲ್ಯಾಣವನ್ನು ಬಸವಕಲ್ಯಾಣವನ್ನಾಗಿಸಿದ್ದು... ಹೇಳ್ತಾ ಹೋದರೆ ಅದೊಂದು ಪುಸ್ತಕವೇ ಆಗುತ್ತದೆ. ಏಕೆಂದರೆ ಅವರಿಗೆ ಅವರೇ ಮಾದರಿಯಾಗಿದ್ದರು. ಅವರ ಪುತ್ರ ಅರವಿಂದ ಜತ್ತಿಯವರ ನೇತೃತ್ವದಲ್ಲಿ ಇಂದಿಗೂ ಬಸವ ಸಮಿತಿಯಲ್ಲಿ ಬಸವಾದಿ ಶಿವಶರಣರ ಉಸಿರು ಜಂಗಮಗೊಳ್ಳುವಂತೆ ಮಾಡಿದ್ದೊಂದು

ದೊಡ್ಡ ಕಥೆಯೇ ಆಗಿದೆ... ಹೀಗೆ ಸಾಮಾನ್ಯ ಬಸಪ್ಪನನ್ನು ಈ ರಾಷ್ಟ್ರವೇ ಹೆಮ್ಮೆ ಪಡುವಂಥ ಬಿ.ಡಿ.ಜತ್ತಿಯವರನ್ನಾಗಿಸಿದ್ದು ಬೆಳೆಯುವ ಸಿರಿ ಮೊಳಕೆಯಲ್ಲಿ ನೋಡಿದ ಶಿವಯೋಗಿಗಳ ಅಂದಿನ ಮಾತು. ನಿಜ ಶಿವಯೋಗಿಗಳ ಅಂದಿನ ಆ ಮಾತು ಎಷ್ಟು ಸತ್ಯ ನೋಡಿ.

ಹೀಗೆ ಶಿವಯೋಗಿಗಳು ನುಡಿಯುತ್ತಿದ್ದರು. ಅದು ವಾಸ್ತವದಲ್ಲಿ ನಡೆಯುವಂತಾಗುತ್ತಿತ್ತು. ಅವರು ನಡೆದುದನ್ನು ಮತ್ತು ನಡೆಯುವುದನ್ನು ಮಾತ್ರ ನುಡಿಯುತ್ತಿದ್ದರು. ತಕ್ಷಣಕ್ಕೆ ಬಾಯಿಗೆ ಬಂದರೆ ನುಡಿಯುತ್ತಿದ್ದರು ಆದರೆ ಹಾಗೆ ನುಡಿದಂತೆ ತಾವು ನಡೆದೇ ತೋರಿಸುತ್ತಿದ್ದರು. ಚಿತ್ರದುರ್ಗದ ಮುರುಘಾ ಮಠದ ಪರಂಪರೆಯಿಂದ ಬಂದ ಶಿವಯೋಗಿಗಳು ಒಮ್ಮೆ ಸವದತ್ತಿಯಲ್ಲಿ ಪುರಾಣ ಮಾಡುತ್ತಿದ್ದಾಗ "ಚೆನ್ನವೀರ ದೇವರು" ಬರುತ್ತಾರೆ. ಆಗ ಶಿವಯೋಗಿಗಳು ನಮಗೆಲ್ಲ ಜಗದ್ಗುರುಗಳಾಗುವವರು ಬಂದಿದ್ದಾರೆ ಇವರಿಗೆ ಜಾಗ ಕೊಡಿ ಎಂದು ತಮ್ಮ ಪಕ್ಕದಲ್ಲಿ ಕೂರಿಸಿಕೊಂಡರಂತೆ. ಮುಂದೆ ಇವರೇ ಮುರುಘ ರಾಜೇಂದ್ರ ಬ್ರಹನ್ಮಠಕ್ಕೆ ಪೀಠಾಧ್ಯಕ್ಷರಾಗುತ್ತಾರೆ.

ಬದುಕಿನ ಸತ್ಯಗಳನ್ನು ಮುಂದಾಗುವ ಸತ್ಯ ಘಟನೆಗಳನ್ನು ತಮ್ಮ ಪ್ರವಚನದಲ್ಲಿ ಉದಾಹರಣೆ ಸಮೇತ ಕಥಾ ಪ್ರಸಂಗಗಳ ಮೂಲಕ ಹೇಳುವ ಶಿವಯೋಗಿಗಳ ವಿಧಾನ ಬಹಳ ಸೊಗಸಾಗಿರುತ್ತಿತ್ತು. ಬಸವಣ್ಣನ ವಚನಗಳನ್ನಂತೂ ಅಪ್ಪಿಕೊಂಡು ಕುಣಿದಾಡುತ್ತಿದ್ದರು. ಇವು "ಅಪ್ಪನ ವಚನಗಳು" ಎಂದು ಅವುಗಳ ಕುರಿತು ಅಧ್ಯಯನ ಧ್ಯಾನ, ಅನುಭವಿಸುವಿಕೆ, ಅನುಭಾವಿಸುವಿಕೆಗಳ ಮೂಲಕ ಜನಮಾನಸಕ್ಕೆ ತಲುಪಿಸುತ್ತಿದ್ದರು. ನೆರೆದವರನ್ನು ಭಾವಲೋಕದಲ್ಲಿ ತೇಲಾಡಿಸುತ್ತಿದ್ದರು. ಹೀಗಾಗಿ ಇವರ ಪ್ರವಚನವನ್ನು ಆಸ್ವಾದಿಸಿ ಅನುಭಾವಿಸಲು ವಿವಿಧ ಮಠಾಧೀಶರು, ವಿರಕ್ತರು, ಸಾಧಕರು ಬರುತ್ತಿದ್ದರು. ಅವರು ಜನ ಸಾಮಾನ್ಯರ ಮಧ್ಯದಲ್ಲಿಯೇ ಕುಳಿತುಕೊಳ್ಳುತ್ತಿದ್ದರು. ಅಲ್ಲಿ ಬಸವಣ್ಣನ ಸಮಸಮಾಜದ ಪ್ರಾಯೋಗಿಕ ವೇದಿಕೆಯಾಗಿರುತ್ತಿತ್ತು.

ಶಿವಯೋಗಿಗಳ ಪರಿವರ್ತನಾತ್ಮಕ ನಡೆ ಹೇಗಿತ್ತೆಂದರೆ, ಒಮ್ಮೆ ಅಥಣಿಯ ಮಠದಲ್ಲಿ ಕಳ್ಳತನವಾಯಿತಂತೆ ಆಗ ಶಿವಯೋಗಿಗಳು ಚಿಂತಿಸದೇ "ಇರಲಿ ಬಿಡಿ ಇದ್ದವ ಕೊಟ್ಟು ಹೋದ, ಇಲ್ಲದವನು ಅದನ್ನೇ ತೆಗೆದುಕೊಂಡು ಹೋದ. ಇದರಲ್ಲಿ ನಮ್ಮದೇನಿದೆ?" ಎಂದರಂತೆ. ಒಂದೊಮ್ಮೆ ಮಠದ ಆವರಣದಲ್ಲಿ ಮೋಸಂಬಿ ಹಣ್ಣನ್ನು ಕದ್ದು ಹೊರಟಿದ್ದ ಹುಡುಗನನ್ನು ಕರೆದು, "ತಮ್ಮಾ ಹಣ್ಣುಗಳು ಒಂದಿಷ್ಟು ಹುಳಿ ಇರಬಹುದು ತಗೋ ಈ ಸಕ್ರಿ ತಗೋ ಆ ಹಣ್ಣಿನ ರಸದಲ್ಲಿ ಬೆರೆಸಿಕೊಂಡು ತಿನ್ನು" ಎಂದರಂತೆ ಈ ಭಾವದಲ್ಲಿ ಕಳ್ಳರನ್ನು, ಸುಳ್ಳರನ್ನು ಪರಿವರ್ತಿಸುವ ಬಸವಣ್ಣನ ಅಂತಃಕರುಣೆ ಶಿವಯೋಗಿಗಳಲ್ಲಿ ಇರುವುದನ್ನು ಗಮನಿಸಬಹುದು. ಈ ಭಾವ ಬರಲು ಕಾರಣ ಪ್ರತಿಯೊಬ್ಬರಲ್ಲಿ ಆ ದೇವನಿರುವನೆಂಬ ಬಸವ ಪ್ರಜ್ಞೆ ಶಿವಯೋಗಿಗಳಿಗಿತ್ತು. ಅದಕ್ಕಾಗಿ ಸಕಲ ಜೀವಿಗಳಿಗೂ ಲೇಸನೇ ಬಯಸುವ ಉದಾರ ಪರಿವರ್ತನಾತ್ಮಕ ಧರ್ಮ ಅವರದ್ದಾಗಿತ್ತು.

ಮಠದ ಆಡಳಿತ ಮಂಡಳಿ ಒಮ್ಮೆ ಶಿವಯೋಗಿಗಳ ಬಳಿಗೆ ಬಂದು ಮಠಕ್ಕಾಗಿ ಒಂದು ಹೊಲ ಖರೀದಿಸಬೇಕೆಂಬ ಉದ್ದೇಶ ಹೇಳಿದಾಗ, "ನಮ್ಮಲ್ಲಿ ಈಗಾಗಲೇ ಇರುವ ಹೊಲವೇ ಬೀಳು ಬಿದ್ದಿದೆ, ಅದರ ತುಂಬ ಕಸ ಬಿದ್ದಿದೆ, ಶಿವ ನೀಡಿದ ಹೊಲದ ನಿರ್ಲಕ್ಷ್ಯ ಸಲ್ಲದು, ಹೀಗಿರುವಾಗ ಹೊಸ ಹೊಲ ನಮಗೇಕೆ ಬೇಕು?" ಬ್ಯಾಡ್ರಪ್ಪಾ ಎನ್ನುತ್ತಾರಂತೆ. ಮಠಕ್ಕೆ ಸ್ವಂತ ಹೊಲವೇ ಇಲ್ಲದಿರುವಾಗ ಸ್ವಾಮಿಗಳು ಹೀಗೇಕೆ ಹೇಳುತ್ತಾರೆ ಎನ್ನುವಷ್ಟರಲ್ಲಿಯೇ ಮತ್ತೇ



ಶಿವಯೋಗಿಗಳೇ "ಮಾನವ ಜೀವನವೇ ಹೊಲವಿದ್ದಂತೆ, ಕಾಳಜಿ ಇಲ್ಲದಿದ್ದರೆ ಜೀವನವೆಂಬ ಮನೆ ಪಾಳು ಬೀಳುವುದು, ಬದುಕೆಂಬ ಹೊಲ ಬೀಳು ಬೀಳುವುದು. ದೇವರು ನಮಗೆ ಬುದ್ಧಿ ಕೊಟ್ಟಿರುವನು ಅದನ್ನು ಬಳಸಿದರೆ ಮಾನವ ಜೀವನ ಪಾವನವಾಗುವುದು" ಎಂಬ ವಿಶೇಷ ಸಂದೇಶ ತಿಳಿಸಿದರಂತೆ. ಮಠದಲ್ಲಿ ತಾವು ನೆಲದ ಮೇಲೆಯೇ ಮಲಗಿಕೊಂಡು ಶರಣರ ವಚನಗಳನ್ನು ಪಲ್ಲಂಗದ ಮೇಲಿರಿಸಿ ಅವುಗಳಿಗೆ ನಮಿಸಿ ಅವುಗಳಂತೆ ನನ್ನನ್ನು ನಡೆಸಲು ಪ್ರೇರೇಪಿಸು ಬಸವಣ್ಣ ಎನ್ನುತ್ತಿದ್ದರಂತೆ.

ಹೀಗೆ ತಮ್ಮ ಪ್ರವಚನದಲ್ಲಿ ತಮ್ಮ ನಡೆಯಲ್ಲಿ ಶಿವಯೋಗಿಗಳು ಕೊಡುತ್ತಿದ್ದ ಹಲವಾರು ಸಂದೇಶಗಳು ಇಡೀ ವ್ಯವಸ್ಥೆಯನ್ನೇ ಪ್ರಗತಿಪಥದತ್ತ ಕೊಂಡೊಯ್ಯಲು ಸಹಕಾರಿಯಾಗುವಂತಿದ್ದವು. "ಬಿತ್ತಿದ್ದನ್ನು ಬೆಳೆದುಕೋ", "ನಡತೆಯೆಂಬುದೇ ಏಕ ನಿಷ್ಠೆ ಅದನ್ನು ಪಾಲಿಸು", "ಕಾಯಕವೆಂಬ ಸೇವೆ ಮಾಡುವಾಗ ಒಳಗಿನ ಅರಿವು ಅದಕ್ಕೆ ಸಾಕ್ಷಿಯಾಗುತ್ತಿರಲಿ" ಎಂಬ ಆತ್ಮ ವಿಮರ್ಶೆಯ ಸಂದೇಶಗಳನ್ನು ನೀಡುತ್ತ ಬದುಕಿದ ಎಂಬತ್ತೈದು ವರ್ಷಗಳೂ ತಮ್ಮ ಅಪಾರ ಜ್ಞಾನ ಮತ್ತು ನಡೆಯ ಸಂಪತ್ತಿನಿಂದ ಜಂಗಮದಲ್ಲಿ ತಾವು ಜಂಗಮಗೊಳ್ಳುತ್ತಿದ್ದರು. ಯಾವುದೋ ಒಂದು ಮಠಕ್ಕೆ ಮೂರ್ತಿಯಾಗದೇ ಸಮಾಜದ ಜಂಗಮಕ್ಕೆ ಗುರುಮೂರ್ತಿಯಾಗಬೇಕೆಂಬುದು ಅವರ ಸಾಕ್ಷಿಪ್ರಜ್ಞೆಯಾಗಿತ್ತು. ಹಾಗಾಗಿ ಅಥಣಿಯ ಆ ಮಠ ಕೇವಲ ಗಚ್ಚಿನ ಮಠವಾಗಿ ಸ್ಥಾವರವಾಗುಳಿಯಲಿಲ್ಲ ಅದು ಅಕ್ಷರಶಃ ಅನುಭವ ಮಂಟಪವಾಗಿತ್ತು. ಅದು ವಚನ ಮಂಟಪವಾಗಿತ್ತು. ಸಮಾಜಕ್ಕೆ ಜಂಗಮಗೊಳ್ಳುತ್ತಲಿತ್ತು. ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲವೆಂಬ ಬಸವ ಪ್ರಜ್ಞೆ ಅಲ್ಲಿ ಚಲನಶೀಲವಾಗಿತ್ತು.

ಒಮ್ಮೆ ಸಿರಸಂಗಿಯ ಲಿಂಗರಾಜರು ಶಿವಯೋಗಿಗಳ ಮಠಕ್ಕೆ ತಮ್ಮ ಆಸ್ತಿಯನ್ನು ಮಠಕ್ಕೆ ದಾನ ಮಾಡಬೇಕೆಂದು ಬಯಸಿದಾಗ, ನಿಮ್ಮ ಆಸ್ತಿಯನ್ನು ಈ ಮಠಕ್ಕೆ ದಾನ ಮಾಡುವ ಬದಲಿಗೆ ಒಂದು ಶಿಕ್ಷಣ ಸಂಸ್ಥೆಗೆ ದಾನ ಕೊಡಿ ಅಥವಾ ನೀವೇ ಒಂದು ಶಿಕ್ಷಣ ಸಂಸ್ಥೆಯನ್ನು ರೂಪಿಸಿ ಅಲ್ಲಿ ಶಿಕ್ಷಣಾರ್ಥಿಯಾಗಿ ಬರುವ ವಿದ್ಯಾರ್ಥಿಗಳಿಗೆ ಪ್ರತಿ ಕ್ಷಣ ಶಿಕ್ಷಣ ದಾಸೋಹವಾಗುವಂತೆ ಮಾಡಿ ಎಂದರಂತೆ. ಶಿವಯೋಗಿಗಳ ಈ ನುಡಿಯ ಫಲಿತವಾಗಿಯೇ ಸೃಜಿಸಲ್ಪಟ್ಟಿರುವ ಕೆ.ಎಲ್.ಇ. ಶಿಕ್ಷಣ ಸಂಸ್ಥೆ ಇಂದು ಪ್ರತಿಷ್ಠಿತ ಶಿಕ್ಷಣ ಸಂಸ್ಥೆಯಾಗಿ ದಿಲ್ಲಿಯವರೆಗೆ ಮಾನ್ಯವಾಗಿದೆ. ಈ ಸಂಸ್ಥೆಯಲ್ಲಿ ಕಲಿತ ಬಹುತೇಕ ವಿದ್ಯಾರ್ಥಿಗಳು ತಮ್ಮ ಆದರ್ಶ ಬದುಕಿನ ಪಥವನ್ನು ತಾವೇ ರೂಪಿಸಿಕೊಂಡಿರುವ ಉದಾಹರಣೆಗಳಿವೆ. ಇದರಿಂದ ಪ್ರೇರಿತರಾದ ವಾರದ ಮಲ್ಲಪ್ಪ ಶರಣರು ಸಹ ತಮ್ಮ ಆಸ್ತಿಯ ಕೆಲ ಭಾಗವನ್ನು ಸಂಸ್ಕೃತ ಪಾಠಶಾಲೆಗೆ ದಾನ ಮಾಡಿದರು. ಹೀಗಾಗಿ ಅಥಣಿಯ ಶಿವಯೋಗಿಗಳ ಈ ಪ್ರೇರಣಾತ್ಮಕ, ಪರಿವರ್ತನಾತ್ಮಕ ಮತ್ತು ನಿಸ್ವಾರ್ಥ ಭಾವದಿಂದ ಅಥಣಿ ಒಂದು ಆದರ್ಶ ಕಲ್ಯಾಣ ನಾಡಾಗಿ ಪರಿವರ್ತಿತವಾಗಿತ್ತು. ಅಂದಿನ ಕಾಲದಲ್ಲಿ "ಕಾಶಿಗೆ ಹೋಗುವ ಬದಲು ಅಥಣಿಗೆ ಹೋಗು" ಎಂಬ ಜನನುಡಿ ಅಲ್ಲಿ ಬಳಕೆಯಲ್ಲಿತ್ತು.

ಹೀಗೆ ಶಿವಯೋಗಿಗಳು ತಾವು ರೂಪಿಸಬಯಸಿದ್ದ ಸಮ ಸಮಾಜದಲ್ಲಿ ತಮ್ಮ ನಡೆಯ ಮೂಲಕ ಜಂಗಮವಾಗುತ್ತಲೇ ದಿನಾಂಕ ೨೩.೦೪.೧೯೨೧ ಶನಿವಾರದಂದು ಇಷ್ಟಲಿಂಗ ಪೂಜಿಸಿಕೊಳ್ಳುತ್ತಿರುವಾಗ ಇಷ್ಟಲಿಂಗದಲ್ಲಿ ನೆಟ್ಟ ದೃಷ್ಟಿ ಮತ್ತೇ ಭಾವಲಿಂಗದಲ್ಲಿ ಬಯಲಾಗದೇ ಮಹಾಲಿಂಗದಲ್ಲಿ ಲೀನವಾಗಿಬಿಡುತ್ತದೆ. ಮುಂಬರುವ ೨೩.೦೪.೨೦೨೧ಕ್ಕೆ ಶಿವಯೋಗಿಗಳು ಬಯಲಲ್ಲಿ ಬಯಲಾಗಿ ಶತಮಾನವೇ ಕಳೆದುಹೋಗುತ್ತದೆ ಆದರೆ ಅವರು ಮಾಡಿದ ಮಾಟ,

ಮಾಡಿಯೂ ಮಾಡದಂತಿದ್ದ ಅವರ ಜಂಗಮಸೇವೆ ಶರಣರುಸಿರಾಗಿ ಜೀವಿಸುತ್ತಿದ್ದ ಕಾರಣ ಅವರ ಲಿಂಗೈಕ್ಯರಾದ ಶತಮಾನದ ನೆನಪಿಗಾಗಿ ಅವರಿಗೆ ಪ್ರಿಯವಾದ ಶರಣ ಸಂಸ್ಕೃತಿಯ ರಕ್ಷಣೆಗಾಗಿ ವಚನ ಸಾಹಿತ್ಯದ ಮತ್ತಷ್ಟು ಪ್ರಸಾರಕ್ಕಾಗಿ ಅನುಭಾವಕ್ಕಾಗಿ ವಿನೂತನ ಕಾರ್ಯಕ್ರಮಗಳನ್ನು ರೂಪಸುವ ಮೂಲಕ ಮತ್ತೇ ಮತ್ತೇ ಶಿವಯೋಗಿಗಳನ್ನು ಜನಮಾನಸದಲ್ಲಿ ಮತ್ತು ಪ್ರತಿಯೊಬ್ಬರ ಮನೆಮನಗಳಲ್ಲಿ ಇಂಬಿಟ್ಟುಕೊಳ್ಳುವಂತೆ ಯಾವುದಾದರೂ ಸಂಘಟಕರು ಪ್ರಯತ್ನಿಸಿದರೆ ಅದೊಂದು ಮಾದರಿಯ ನಡೆಯಾಗುತ್ತದೆ.

ಶಿವಯೋಗಿಗಳು ಹೇಳಿದ್ದು ಇದನ್ನೆ ಅಲ್ಲವೇ "ಬಿತ್ತಿದ್ದನ್ನು ಬೆಳೆದುಕೋ" ಎಂದು. ನಾವು ಬಿತ್ತಿದ್ದೇ ಬೆಳೆದುಕೊಳ್ಳಬೇಕಾಗಿರುವುದರಿಂದ ಬಿತ್ತುವಾಗ ಏನು ಬಿತ್ತಬೇಕೆಂಬುದನ್ನು ಅರಿತು ಪ್ರತಿಯೊಬ್ಬರು ಬಿತ್ತುವ ನಡೆಯನ್ನು ನಡೆಯಬೇಕಿದೆ. ನಮ್ಮ ದೇಶವಷ್ಟೇ ಅಲ್ಲ ಇಡೀ ವಿಶ್ವವೇ ಇಂದು ಶಿವಯೋಗಿಗಳು ಹೇಳಿರುವ "ಬಿತ್ತಿದ್ದನ್ನು ಬೆಳೆದುಕೋ" ಎಂಬ ಮಾತನ್ನು ಅರಿತು ಅಗತ್ಯವಿರುವುದನ್ನಷ್ಟೇ ಬಿತ್ತಬೇಕಿದೆ. ಬಿತ್ತಿ ಬೆಳೆದುಕೊಳ್ಳಬೇಕಿದೆ. ಇಂದಿಗೂ ಅಥಣಿಯಲ್ಲಿ ಜಾತ್ರೆಯ ಸಮಯದಲ್ಲಿ ಸತತವಾಗಿ ಹನ್ನೆರಡು ತಾಸುಗಳವರೆಗೆ ರಥೋತ್ಸವ ನಡೆಯುತ್ತದೆ. ಇಷ್ಟು ದೀರ್ಘ ಕಾಲದವರೆಗೆ ರಥೋತ್ಸವ ಸಾಗುವುದು ಬಹುಶಃ ಇದೊಂದೇ ಸ್ಥಳವೆನಿಸುತ್ತದೆ. ಆದರೆ ಈ ರಥೋತ್ಸವ ಕೇವಲ ಭೌತಿಕ ರಥದ ಉತ್ಸವವಾಗಿರದೇ ದಿನದ ಕೇವಲ ಹನ್ನೆರಡು ತಾಸುಗಳವರೆಗಷ್ಟೇ ಅಲ್ಲ ಪ್ರತಿ ದಿನದ ಪ್ರತಿ ಕ್ಷಣಕ್ಷಣವೂ ಎಲ್ಲರ ಮನೆ ಮನಗಳಲ್ಲಿ ನಡೆ ನುಡಿಯ ರಥೋತ್ಸವವಾಗಬೇಕು, ಕಾಯಕದ ರಥೋತ್ಸವವಾಗಬೇಕು, ದಾಸೋಹದ ರಥೋತ್ಸವವಾಗಬೇಕು, ಜಂಗಮದ ರಥೋತ್ಸವವಾಗಬೇಕು ಮತ್ತು ಶಿವಯೋಗೋತ್ಸವದ ರಥ ಎಲ್ಲರ ರಥವಾಗಿ ಪ್ರತಿಯೊಬ್ಬರ ನಡೆಯಾಗಬೇಕೆಂಬುದು ಅಥಣಿ ಶಿವಯೋಗಿಗಳಾಶಯವಾಗಿತ್ತೆನಿಸುತ್ತದೆ.

*ಸಹಾಯಕ ಲೆಕ್ಕಾಧಿಕಾರಿ, ಈಕರಸಾ. ಸಂಸ್ಥೆ, ಕೇಂದ್ರ ಕಛೇರಿ, ಕಲಬುರ್ಗಿ-೫೮೫೧೦೨*
*ಮೊ: ೯೯೪೫೩೩೦೪೯೨*

ಆದರೂ ವಚನಗಳನ್ನು ಕಾವ್ಯವೆಂದು ಖಚಿತವಾಗಿ ಗುರುತಿಸುವುದಕ್ಕೆ ಕನ್ನಡದಲ್ಲಿ ನವ್ಯಕಾವ್ಯ ಬರುವವರೆಗೂ ಕಾಯಬೇಕಾಯಿತು. ನವ್ಯಕಾವ್ಯ ಬಂದಮೇಲೆ, ವಚನಗಳನ್ನು ಕಾವ್ಯವೆಂದು ಸಮರ್ಥಿಸುವ ಅಗತ್ಯವೇ ಇಲ್ಲದಂತೆ ಅವು ತಂತಾನೇ ಕಾವ್ಯವಾಗಿಬಿಟ್ಟವು. ಸಾಹಿತ್ಯದ ಇತಿಹಾಸದಲ್ಲಿ ಆಗಾಗ ಕಾಣಿಸಿಕೊಳ್ಳುವ ಹೊಸ ಚಳುವಳಿಗಳು ತಮ್ಮ ಹಿಂದಿನ ಸಾಹಿತ್ಯ ಪರಂಪರೆಗೆ ಹೇಗೆ ಹೊಸ ಅರ್ಥ ಕೊಡಬಲ್ಲವೆಂಬುದಕ್ಕೆ ಇದೊಂದು ಮಹತ್ವದ ನಿದರ್ಶನ. ಇಲ್ಲಿಂದ ಮುಂದೆ, ವಚನಗಳಲ್ಲಿ 'ಕಾವ್ಯಾಂಶ'ಗಳನ್ನು ಕಷ್ಟಪಟ್ಟು 'ಹುಡುಕುವ' ಅಗತ್ಯ ಉಳಿಯಲಿಲ್ಲ. ಬದಲಾಗಿ, ವಚನಗಳನ್ನು ಮುಖ್ಯವಾಗಿ ಕಾವ್ಯದ ಮಾನದಂಡಗಳಿಂದಲೇ ವಿಶ್ಲೇಷಿಸುವ, ವಿಮರ್ಶಿಸುವ ಹೊಸ ಕ್ರಮ ಆರಂಭವಾಯಿತು.

**ಗಿರಡ್ಡಿ ಗೋವಿಂದರಾಜು**



## ನಾಯಕನಹಳ್ಳಿ ಅರಸ ಮುದಿಯಪ್ಪನಾಯಕನ ಕಾಲದಲ್ಲಿ ಲಿಖಿತವಾದ "ಹರಿಹರದೇವರ ರಗಳೆಗಳು" ಹಸ್ತಪ್ರತಿ ಒಂದು ಟಿಪ್ಪಣಿ

**ಡಾ.ಬಿ. ನಂಜುಂಡಸ್ವಾಮಿ**

ನಾಡು ನುಡಿಯ ಸೇವೆಯನ್ನು ನಾನು ಮುಖದಲ್ಲಿ ಸಲ್ಲಿಸಿದ ಹಿರಿಯ ವಿದ್ವಾಂಸರ ಕೃತಿಗಳನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡಬೇಕಾದ ಸಂದರ್ಭ, ಯುವ ವಿದ್ವಾಂಸರು ಹಿರಿಯರ ಸಂಶೋಧನೆಯ ಫಲವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡುತ್ತಾ ಬಂದರೆ ಉಳಿದಿರುವ ಅಲ್ಪ ಸ್ವಲ್ಪ ಗೊಂದಲಗಳು ಪರಿಹಾರವಾಗುತ್ತವೆ. ಹಿರಿಯ ವಿದ್ವಾಂಸರು ಜೀವಿಸಿದಾಗಲೇ ಅವರ ಜೊತೆ ಚರ್ಚೆ ಸಾಧ್ಯವಾದರೆ ಇನ್ನೂ ಹೆಚ್ಚಿನ ಅಧಿಕೃತತೆ ಬರುತ್ತದೆ. ಆ ನಿಟ್ಟಿನಲ್ಲಿ ಪ್ರಯತ್ನಗಳು ಮೇಲಿಂದ ಮೇಲೆ ನಡೆದರೆ ಸಂಶೋಧನಾ ಫಲ ಹೆಚ್ಚು ಸತ್ತ್ವಭರಿತವಾಗುತ್ತದೆ.

ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಹಾಗಲವಾಡಿ ಅರಸು ಮನೆತನದ ಬಗ್ಗೆ ಸುಮಾರು ೧೯೯೦ರಿಂದ ಅಧ್ಯಯನ ಮಾಡುತ್ತಾ ಬಂದಿದ್ದೇನೆ. ಹರಿಹರದೇವರ ರಗಳೆಗಳ ಸಂಪಾದನೆಯಲ್ಲಿ ವಿಶೇಷವಾಗಿ ಉಲ್ಲೇಖಗೊಂಡ ನೂರಿಪ್ಪತ್ತು ರಗಳೆಗಳು ಇರುವ ಈ ಹಸ್ತಪ್ರತಿಯ ಬಗ್ಗೆ ಲೇಖನ ಬರೆಯಲು ಸಿದ್ಧತೆ ಮಾಡಿಕೊಂಡು ಲೇಖನ ಪ್ರಾರಂಭ ಮಾಡಿದ್ದು ೧೯೯೩ರಲ್ಲಿ. ಹಸ್ತಪ್ರತಿಯ ಮಾಹಿತಿ ಸಂಗ್ರಹಣೆಗೆ ಬಹಳಷ್ಟು ಸಮಯ ಬೇಕಾದ್ದರಿಂದ ಆ ಬಗ್ಗೆ ವಿವರ ಆಕಾಶಗಮ್ಯವಾದ್ದರಿಂದ ಬಹಳ ಸಾವಕಾಶವಾಯಿತು.

ಲಿಂ॥ ಎಚ್. ದೇವೀರಪ್ಪನವರು ಹಂಪೆಯ ಹರಿಹರದೇವನ ಇಪ್ಪತುನಾಲ್ಕು ರಗಳೆಗಳನ್ನು ಗ್ರಂಥ ಸಂಪಾದನಾ ಶಾಸ್ತ್ರದಂತೆ ಸಂಪಾದಿಸಿದ್ದಾರೆ. "ಶರಣ ಚರಿತ ಮಾನಸಂ" ಹೆಸರಿನಲ್ಲಿ ಸಿರಿಗೆರೆ 'ಅಣ್ಣನ ಬಳಗದ' ಪರವಾಗಿ ಮೈಸೂರಿನ ಶ್ರೀ ಗೌರೀಶಂಕರ ಬುಕ್ ಡಿಪೋ, ದೇವರಾಜ ಮಾರ್ಕೆಟ್ ಇವರು ೧೯೬೮ರಲ್ಲಿ ಪ್ರಕಟಿಸಿದರು. ಕೃತಿಯನ್ನು ಲಿಂ॥ ಡಾ. ಫ.ಗು. ಹಳಕಟ್ಟಿಯವರಿಗೆ ಅರ್ಪಿಸಲಾಗಿದೆ. ಕನ್ನಡ ನಾಡಿನ ಹಿರಿಯ ವಿದ್ವಾಂಸರಾದ ದಿ॥ ಡಾ॥ ಡಿ.ಎಲ್. ನರಸಿಂಹಾಚಾರ್‌ರವರು ಮುನ್ನುಡಿ ಬರೆದಿದ್ದಾರೆ. ಕವಿ-ಕಾವ್ಯ ವಿಚಾರವನ್ನು ಕುರಿತು ವಿಶೇಷವಾದ ಪೀಠಿಕೆಯನ್ನು ದೇವೀರಪ್ಪನವರು ಬರೆದಿದ್ದಾರೆ. ೫೬೦ ಪುಟದ ಈ ಹೆಚ್ಚೊತ್ತಿಗೆ ಹರಿಹರನ ಕೃತಿಗಳನ್ನು ಅಧ್ಯಯನ ಮಾಡುವವರಿಗೆ ಒಂದು ಕೈಗನ್ನಡಿ. ಈ ಪುಸ್ತಕಕ್ಕೆ ಬಳಸಿದ ಹಸ್ತಪ್ರತಿಗಳ ವಿವರ ಕೊಡುತ್ತಾ "೨೩" ಹಸ್ತಪ್ರತಿ ಬಗ್ಗೆ ಈ ಮಾತುಗಳನ್ನು ಬರೆದಿದ್ದಾರೆ.[೧]

೨೩-ಇದನ್ನು ಚಿತ್ರದುರ್ಗದ ಪ್ರತಿ ಎಂದು ಕರೆದಿದೆ. ಇದು ಚಿಕ್ಕನಾಯಕನಹಳ್ಳಿಯ ಪ್ರತಿ. ೨೮೫ ಪತ್ರಗಳಿವೆ. "ಕ್ರೋಧನ ಸಂವತ್ಸರದ ಭಾದ್ರಪದ ಶು ೧೨ರಲ್ಲಿ ಮುದಿಯಪ್ಪನಾಯಕರ ಬಂಟನಾದಂಥ ಗಡೆಯ ಪಾಫಯ್ಯನ ಸುಪುತ್ರ ಕೃಷ್ಣಯ್ಯನು ಬರೆದು ಮುಗಿಸಿದುದು. ಈ ಲಿಪಿಕಾರನು "ಬರಹ ಕಲಿಸಿದ ಮಲ್ಲಪ್ಪಯ್ಯನ ಪಾದಕೆ ಶರಣು ಶರಣು" ಎಂದು ಗ್ರಂಥಾಂತ್ಯದಲ್ಲಿ ತನ್ನ ಗುರುವನ್ನು ಭಕ್ತಿಯಿಂದ ಸ್ಮರಿಸಿರುವನು. ಅಲ್ಲಲ್ಲಿ ಸುಂದರವಾದ ಚಿತ್ರಗಳನ್ನು ಬಿಡಿಸಿರುವನು ಶಕಟರೇಫವನ್ನು ಬಳಸಿರುವನು ಅಕ್ಷರಗಳು ತುಂಬ ಚೆಲುವಾಗಿವೆ ಎಂದಿದ್ದಾರೆ.

ಡಾ॥ ಹಿರೇಮಲ್ಲೂರ ಈಶ್ವರನ್ ಅವರು ರಚಿಸಿದ ಮಹಾಪ್ರಬಂಧ "ಹರಿಹರನ ಕೃತಿಗಳು ಒಂದು ಸಂಖ್ಯಾ ನಿರ್ಣಯ" ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದಿಂದ ೧೯೭೧ರಲ್ಲಿ ಪ್ರಕಟವಾಗಿದೆ. ಈ ಮಹಾಪ್ರಬಂಧದ ಮಾರ್ಗದರ್ಶಕರು ಪ್ರೊ॥ ಸ.ಸ. ಮಾಳವಾಡರವರು ಡಾ. ಹಿರೇಮಲ್ಲೂರ ಈಶ್ವರನ್ ತಮ್ಮ ಮಹಾಪ್ರಬಂಧದಲ್ಲಿ ತಾವು ಅವಲೋಕಿಸಿದ ಹರಿಹರ ರಗಳೆಗಳ ಹಸ್ತಪ್ರತಿ ಬಗ್ಗೆ ವಿಸ್ತೃತವಾದ ವಿವರವನ್ನು ನೀಡಿದ್ದಾರೆ.[೨]

### ii. 'ಇ' ಪ್ರತಿ

ಈ ಓಲೆಗ್ರಂಥವು ಚಿತ್ರಕಲ್‌ದುರ್ಗ ಮಠದ ಶಾರದಾ ಭಂಡಾರಕ್ಕೆ ಸೇರಿದ್ದು. ಇದರಲ್ಲಿ ಒಟ್ಟು ೨೮೫ ಗರಿಗಳಿರುವವು. ಗ್ರಂಥದ ಉದ್ದ x ಅಗಲ ೨೦" x ೨" ಇರುವುದು. ಒಂದು ಪುಟಕ್ಕೆ ೧೨ ಪಂಕ್ತಿಗಳಿರುವವು. ಗ್ರಂಥಕ್ಕೆ ರಕ್ಷಾಕವಚವಾಗಿರುವ ಕಟ್ಟಿಗೆಯ ಪಟ್ಟಿಯ ಮೇಲೆ "ಹಂಪೆಯ ಹರೀಶ್ವರ ದೇವರು ನಿರೂಪ್ಸಿದ ೧೨೨ ರಗಳೆ" ಎಂದು ಬರೆದು ೧೨೨ ಅಂಕಿಯನ್ನು ತಿದ್ದಿ "೧೨೦" ಎಂದು ಮಾಡಲಾಗಿದೆ. ಅದೇ ಪಟ್ಟಿಯ ಮೇಲೆ "ನೂಜೊಂದು ರಗಳೆ" ಎಂದು ಬರೆಯಲಾಗಿದೆ.

ಲಿಪಿಗಾರರು "ಶ್ರೀ ವಿರೂಪಾಕ್ಷಲಿಂಗಾಯ ನಮಃ" "ಶ್ರೀ ತೀರ್ಥರಾಮೇಶ್ವರ ಲಿಂಗಾಯ ನಮಃ" "ಶ್ರೀ ಹಂಪೆಯ ಹರೀಶ್ವರ ದೇವರು ಪೇಳಿದ ನೂಜೆಪ್ಪತ್ತು ರಗಳೆಯ ಪುಸ್ತಕಕ್ಕೆ ಶುಭಮಸ್ತು ಶೋಭನಮಸ್ತು" ಎಂದು ಪೀಠಿಕೆಯಲ್ಲಿ ಹೇಳಿ ಪ್ರತಿಮಾಡುವುದಕ್ಕೆ ಪ್ರಾರಂಭಿಸಿದ್ದಾರೆ. ಕೊನೆಯಲ್ಲಿ "ಅಂತು ರಗಳೆ-ಕ್ಕಂ ರಗಳೆ ಸಂಪೂರ್ಣಂ" ಎಂದು ಬರೆದು ರಗಳೆಯ ಸಂಖ್ಯೆಯನ್ನು ಉಲ್ಲೇಖಿಸಲಾರದೆ ಹೋಗಿರುವನು. ಪ್ರತಿ ಮುಗಿಸುವಲ್ಲಿ ಹೀಗೆ ಬರೆದಿದ್ದಾನೆ.

**"ಸ್ವಸ್ತಿ ಶ್ರೀ ಓಂ ನಮಃಶಿವಾಯ ನಮಃ"**
**ಕೃತಿಯೆಂತು ಚೆಂಬುದಜೆಯೆಂ**
**ಪ್ರತಿಯಂ ತಿರ್ದುವೊಡೆ ವರ್ಮಕರ್ಮವನಜೆಯೆಂ ।**
**ಮತಿವಂತರ್ಬಯ್ಯದಿರಾಂ**
**ಪ್ರತಿಯೊಳಗೆಂತಿರ್ದುದಿರ್ದ ಪರಿಯೊಳೆ ಬರದೆಂ ॥**

ಶ್ರೀ ವಿರೂಪಾಕ್ಷಯ ನಮಃ ಶ್ರೀ ತೀರ್ಥರಾಮೇಶ್ವರಲಿಂಗಾಯ ನಮಃ ಶ್ರೀ ಗುರುವಿನ ಪಾದಪದ್ಮಂಗಳಿಗೆ ಶರಣು ಶರಣು ಶರಣು

**ಪರಮಪವಿತ್ರನಾಗುಮಿಗೆ ಪೆರ್ಚಲಿ ನಿನ್ನೊಳಗಾಯ ಶ್ರೀಯು ಮ**
**ತ್ತುರತರ ಪುತ್ರಪೌತ್ರರುಜೆ ಬಾಂಧವ ಸಂಕುಳವೆಲ್ಲ ಸಂತತಂ**
**ವರಗುರು ತೀರ್ಥರಾಮೆನೊಲವಿಂ ಸಲೆ ಸಂತಸದಿಂದೆಯೆನ್ನಯೀ**
**ಪರತೆಯೊಳೆಯ್ದೆ ಬಾಳೆ ಮುದಿಯೇಂದ್ರ ಮಹೀಪತಿ ಭಕ್ತಬಾಂಧವಾ**

ಸ್ವಸ್ತಿಶ್ರೀ ಜಯಾಭ್ಯುದಯ ಸಾಲಿವಾಹನ ಶಕ ವರುಷಂಗಳು _ನೆಯ ಕ್ರೋಧನ ಸಂವತ್ಸರದ ಭಾದ್ರಪದ ಹನ್ನೆರಡಲು ಮುದಿಯಪ್ಪ ನಾಯಕ್ಕರ ಬಂಟನಾದಂಥ ಗಡೆಯ ಪಾಪಯ್ಯನ ಸುಪುತ್ರ ಕೃಷ್ಣಯ್ಯನು ಬರದ ಸಮರ್ಪಿಸಿದ ಪುಣ್ಯಪುರಾತನರ ಶಾಸ್ತ್ರದ ಪುಸ್ತಕ ಹಂಪಿಯ ಹರೀಶ್ವನ ದೇವರು ವಿರಚಿಸಿದ ನೂಜೆಪ್ಪತ್ತು ಪುಣ್ಯ ಗರಳೆಯ ಸಂಪೂರ್ಣಂ ಮಂಗಳಮಹಾ ಶ್ರೀ ಶ್ರೀ ಶ್ರೀ ಶೋಭನಮಸ್ತು ನಿರ್ವಿಘ್ನಮಸ್ತು ಆಯುರಾರೋಗ್ಯ ಐಶ್ವರ್ಯಮಸ್ತು ಬರಹವ ಕಲಿಸಿದ ಮಲ್ಲಪ್ಪಯ್ಯನ ಪಾದಕ್ಕೆ ಶರಣು ಶರಣು.



ಗ್ರಂಥದ ಆರಂಭದ ಮೊದಲಲ್ಲಿ ಮೂರು ಗರಿಗಳು. ಕೊನೆಯಲ್ಲಿ ನಾಲ್ಕು ಗರಿಗಳು ಖಾಲಿ ಇದೆ. ಆದಿಯಿಂದ ಅಂತ್ಯದವರೆಗಿನ ಎಲ್ಲ ರಗಳೆಗಳ ಹೆಸರುಗಳನ್ನು ಬರೆದು ಎಣಿಸಿದರೆ ಅವುಗಳ ಸಂಖ್ಯೆ ೧೨೫ ಆಗುವುದು. ಇದರಲ್ಲಿ ನಾಲ್ಕು ರಗಳೆಗಳು ಪುನರಾವೃತ್ತಿಯಾಗಿರುವವು. ಅಲ್ಲದೆ ತಿರುಜ್ಞಾನ ಸಂಬಂಧದ ರಗಳೆಯ ಹೆಸರನ್ನು ಮಾತ್ರ ಉಲ್ಲೇಖಿಸಿ ಈ ಹೆಸರಿನ ರಗಳೆಯನ್ನೇ ಬರೆದಿರುವುದಿಲ್ಲ. ಈ ಗ್ರಂಥದಲ್ಲಿಯೂ ಅ.ಕ.ಗ. ಇರುವುದು. ಶಕಟ ರೇಫವನ್ನು ಬಳಸಲಾಗಿದೆ. ಪ್ರತಿ ರಗಳೆಯ ಪ್ರಾರಂಭದ ಗರಿಯ ಎರಡೂ ಅಂಚಿನಲ್ಲಿ ನಯನ ಮನೋಹರವಾದ ಚಿತ್ರಗಳನ್ನು ಕೊರೆದು ಅತಿ ಶ್ರದ್ಧೆಯಿಂದ ಮಸಿತುಂಬಿ ಗ್ರಂಥವನ್ನು ಪ್ರತಿಕಾರನು ಅಂದಗೊಳಿಸಿರುವನು. ಗ್ರಂಥವು ಅಚ್ಚುಕಟ್ಟಾಗಿಯೂ, ಶುದ್ಧವಾಗಿಯೂ ಇದೆ ಎಂದಿದ್ದಾರೆ.

ಇದೇ ಹಸ್ತಪ್ರತಿಯ ಉಲ್ಲೇಖ ಶ್ರೀ ಎಚ್. ದೇವೀರಪ್ಪನವರಿಂದ ಸಂಪಾದಿತರಾಗಿ ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಪ್ರಕಟಗೊಂಡ "ಹರಿಹರೇತರಕೃತ ವಿರೂಪಾಕ್ಷಾಂಕಿತ ಶಿವಶರಣ ಸಂಪುಟ"[೩] ಪುಟ ೧೨೮ರಲ್ಲಿ "ಪಾಠಶೋಧನೆ" ಎಂಬ ಉಪಶೀರ್ಷಿಕೆಯ ಅಡಿಯಲ್ಲಿ ಈ ಮೇಲಿನ ಹಸ್ತಪ್ರತಿ ಬಗ್ಗೆ ಈ ರೀತಿ ಬರೆದಿದ್ದಾರೆ.

"ಡಾ॥ ಹಿರೇಮಲ್ಲೂರು ಈಶ್ವರನ್ ಅವರಲ್ಲಿದ್ದ ತಾಳೆಯೋಲೆಯ ಪ್ರತಿ, ಪತ್ರ ಸಂಖ್ಯೆ ೨೮೫ ಬರವಣಿಗೆ ಲಕ್ಷಣವಾಗಿದೆ. ಶಕಟರೇಫದ ಬಳಕೆಯೂ ಇದೆ. ಇದನ್ನು ಪ್ರತಿ ಮಾಡಿ ಮಲಗಿಸಿದ್ದು ಕ್ರಿ.ಶ. ೧೭೪೫ರಲ್ಲಿ. ಗಡೆಯ ಪಾಪಯ್ಯನ ಸುಪುತ್ರನಾದ ಕೃಷ್ಣಯ್ಯನು ತನ್ನ ಸ್ವಾಮಿಯಾದ ಮುದಿಯಪ್ಪವಾಯರಿಗಾಗಿ ಬರೆದುದು ಪ್ರತಿ ತುಂಬ ಚೆಲುವಾಗಿದೆ. ಸಮಗ್ರವಾಗಿದೆ ಎಂದಿದ್ದಾರೆ.

ಶ್ರೀ ಎಚ್. ದೇವೀರಪ್ಪನವರು ಬರೆದ "ಕನ್ನಡ ಹಸ್ತಪ್ರತಿಗಳ ಇತಿಹಾಸ"[೪] ಕಿರುಪುಸ್ತಕ ೧೯೭೭ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗಿದೆ. ಮೇಲಿನ ಪುಸ್ತಕದ ಪುಟ ೫೭ರಲ್ಲಿ ಈ ಮೇಲಿನ ಹಸ್ತಪ್ರತಿಯ ಪುಷ್ಪಿಕೆಯನ್ನು ಪ್ರಕಟಿಸಿ "ಲಿಪಿಗಾರಿಕೆಯನ್ನು ಕಲಿಸಿದ ಗುರು ಮಲ್ಲಪ್ಪಯ್ಯನನ್ನು ಈ ಪ್ರತಿಕಾರನು ಭಕ್ತಭಿಮಾನಗಳಿಂದ ಸ್ಮರಿಸಿದ್ದಾನೆ. ಇಂತಹ ಶಿಷ್ಯ ಯಾವ ಕಾಲಕ್ಕೂ ಅಪರೂಪ" ಎಂದಿದ್ದಾರೆ.

ಈ ಮೇಲಿನ ಪುಷ್ಪಿಕೆಯಲ್ಲಿ ಶಕವರ್ಷ ಮತ್ತು ವಾರ ಲಿಖಿತವಾಗದೆ ಇರುವುದರಿಂದ ಕಾಲದ ಬಗ್ಗೆ ನಿರ್ಧರಿಸಿವುದು ಕಷ್ಟವಾಗುತ್ತದೆ. ಇದೇ ಹಸ್ತಪ್ರತಿಯ ಪುಸ್ತಿಕೆಯನ್ನು ವಿದ್ವಾನ್ ಎಂ.ಎಸ್. ಬಸವರಾಜಯ್ಯನವರು ಚಿಕ್ಕನಾಯಕನಹಳ್ಳಿಯಿಂದ ಪ್ರಕಟವಾದ ಶ್ರೀ ಜಿ.ವಿ. ನಾರಾಯಣಮೂರ್ತಿಯವರ ಸಂಭಾವನಾ ಗ್ರಂಥ ಸರ್ವೋದಯ ಪಥ[೫] "ಚಿಕ್ಕನಾಯಕನಹಳ್ಳಿ ರಾಜರ್ಷಿ ಧರ್ಮಪ್ರಭು ಮುದಿಯಪ್ಪನಾಯಕ" ಲೇಖನದಲ್ಲಿ ಈ ಪುಷ್ಪಿಕೆಯನ್ನು ಯಥಾವತ್ತಾಗಿ ಮುದ್ರಿಸಿದ್ದಾರೆ. ಇಲ್ಲಿ ಒಂದು ವಿಷಯ ಸ್ಪಷ್ಟ ಮಾಡಬೇಕು. ಈ ಲೇಖನದಲ್ಲಿ ವಿಷದವಾಗಿ ಚರ್ಚೆಯಾಗಿರುವ ನಾಯಕ ಇಮ್ಮಡಿ ಮುದಿಯಪ್ಪ ನಾಯಕ ಆತನ ರಾಜಧಾನಿ ಹಾಗಲವಾಡಿ ಆ ಸಮಯಕ್ಕೆ ಹಾಗಲವಾಡಿ ದೊರೆಗಳೆಂದು ಪ್ರಖ್ಯಾತಿ ಹೊಂದಿದ್ದರು ಎಂದಿದ್ದಾರೆ. ಶೀರ್ಷಿಕೆಯಲ್ಲಿ "ಚಿಕ್ಕನಾಯಕನಹಳ್ಳಿ ಹಾಗಲವಾಡಿ" ಎಂದು ಪ್ರಸ್ತಾಪವಾಗಬೇಕಾಗಿತ್ತು. ಇಮ್ಮಡಿ ಮುದಿಯಪ್ಪನಾಯಕನ ಕಾಲಕ್ಕೆ ಚಿಕ್ಕನಾಯಕನಹಳ್ಳಿ ವಶದಲ್ಲಿ ಇರಲಿಲ್ಲ. ಈ ಲೇಖನದಲ್ಲಿ ವಿದ್ವಾನ್ ಎಂ.ಎಸ್. ಬಸವರಾಜಯ್ಯನವರು ಸೋಸಲೆಯ ರೇವಣಾರಾಧ್ಯರಿಂದ ಪುಷ್ಪದಂತ

ವಿರಚಿತವಾದ ಪ್ರಾಚೀನತಮವಾದ "ಶಿವಮಹಿಮಾಸ್ತೋತ್ರಕ್ಕೆ" "ಮಹಿಮ್ನಃಪ್ರದೀಪಿಕಾ" ಎಂಬ ಕನ್ನಡ ಟೀಕೆಯೊಂದನ್ನು ಈ ದೊರೆಯೇ ಬರೆಯಿಸಿರುವನು. ಈ ಅಂಶವು ಆ ಕನ್ನಡ ಟೀಕೆಯ ಅಂತ್ಯದಲ್ಲಿ ಸಂಸ್ಕೃತದಲ್ಲಿ ಬರೆದಿರುವ ಶ್ಲೋಕ

**ಚಿಕನಾಯಕಪೂಷ್ಕರ್ತುಃ । ಮುದಿನಾಯಕಭೂಭುಜಃ ।**

**ಮುದೇ ಟೀಕಾ ಕಾರಿತೇಯಂ । ಸೋಮಶೇಖರಯೋಗಿನಾ ॥**

ಎಂಬ ಶ್ಲೋಕದಿಂದ ಚಿಕ್ಕನಾಯಕಪಟ್ಟಣ (ಚಿಕ್ಕನಾಯಕನಹಳ್ಳಿ) ದೊರೆಯಾದ ಮುದಿಯಪ್ಪನಾಯಕ ಮಹಾರಾಜನಿಗಾಗಿ ಆತನ ಗುರುಗಳಾದ ಸೋಮಶೇಖರಶಿವಯೋಗಿಗಳ ಪ್ರೇರಣೆಯಿಂದ ಈ ಟೀಕೆಯು ತನ್ನಿಂದ ರಚಿಸಲ್ಪಟ್ಟಿರುವುದಾಗಿದೆ ಎಂದು ಸೋಸಲೆಯ ರೇವಣಾರಾಧ್ಯರೇ ಸ್ವತಃ ತಿಳಿಸಿರುವರು ಎಂದಿದ್ದಾರೆ. ಸೋಸಲೆ ರೇವಣಾರಾಧ್ಯರ ಕಾಲ ವಿದ್ವಾಂಸರು ಒಪ್ಪಿರುವಂತೆ ಸುಮಾರು ಕ್ರಿ.ಶ. ೧೬೨೩. ಆ ಸಮಯದಲ್ಲಿ ಚಿಕ್ಕನಾಯಕನಹಳ್ಳಿ ರಾಜ್ಯವಾಳುತ್ತಾ ಇದ್ದವನು ಹಿರಿಯ ಮುದಿಯಪ್ಪನಾಯಕ. ಈತ ಸ್ವತಃ ಕವಿ ಅಲ್ಲದೇ ಇದ್ದರೂ ಶಿವಾನುಭವಿಯಾಗಿದ್ದ. ಇವನ ಕಾಲ ಕ್ರಿ.ಶ. ೧೫೯೧-೧೬೨೬. ಈತ ಹಾಗಲದಹಳ್ಳಿಗೆ ಹೊಸಕೋಟೆಯನ್ನು ಕಟ್ಟಿಸಿದ ನಂತರ ಆ ಊರಿಗೆ ಹೊಸ ವೈಭವ ಬಂದು ಹಾಗಲದಳ್ಳಿ ಅಂದಿನಿಂದ ಹಾಗಲವಾಡಿ ಎನಿಸಿಕೊಂಡಿತು. ಆದಾಗ್ಯೂ ಮುದಿಯಪ್ಪನಾಯಕನು ಚಿಕ್ಕನಾಗನಹಳ್ಳಿಯಲ್ಲೇ ತನ್ನ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಆಡಳಿತವನ್ನು ಮುಂದುವರಿಸಿ ಹಲವು ವೀರಶೈವ ಮಠಗಳಿಗೆ ಸಹಾಯ ಮಾಡಿ ಸೋಸಲೆ ರೇವಣಾಚಾರ್ಯ ಎಂಬ ವೀರಶೈವ ಕವಿಗೆ ಆಶ್ರಯನೀಡಿ ಅವನಿಂದ ಹಲವಾರು ಕೃತಿಗಳನ್ನು ಬರೆಯಿಸಿ ಸುಮಾರು ನಲವತ್ತು ವರ್ಷಗಳು ಬಿಗಿಯಾದ ಆಡಳಿತವನ್ನು ನಡೆಸಿ ಕ್ರಿ.ಶ. ೧೬೨೬ರಲ್ಲಿ ಮರಣ ಹೊಂದಿದನು.[೬]

ಹಸ್ತಪ್ರತಿಯ ಪುಷ್ಪಿಕೆಯಲ್ಲಿ ಲಿಪಿಗಾರ ಬರೆದರುವ ಪುಷ್ಪಿಕೆಯಲ್ಲಿ "ಮುದಿಯೇಂದ್ರ ಮಹೀಪತಿ" ಎಂದು ಮಾತ್ರ ಉಲ್ಲೇಖವಿದೆ. ಚಿಕ್ಕನಾಯಕನಹಳ್ಳಿಗೆ ಬಹಳ ಸಮೀಪ ಇರುವ ತೀರ್ಥಪುರದಲ್ಲಿ ತೀರ್ಥರಾಮೇಶ್ವರ ದೇವಾಲಯವಿದೆ. ಚಿಕ್ಕನಾಯಕನಹಳ್ಳಿ-ಹಾಗಲವಾಡಿ ಅರಸು ಮನೆತನದ ಕುಲದೈವ. ಈ ಮೇಲಿನ ಅಧ್ಯಯನದಿಂದ ಹರಿಹರನ ರಗಳೆಯಲ್ಲಿ ಉಲ್ಲೇಖಿಗೊಂಡಿರುವ ಮುದಿಯಪ್ಪನಾಯಕ ಮೊದಲೇ ಮುದಿಯಪ್ಪನಾಯಕನೇ ಇರಬೇಕು. ಡಾ॥ ಡಿ.ಎನ್. ಯೋಗೀಶ್ವರಪ್ಪ ತಮ್ಮ ಮಹಾಪ್ರಬಂಧದ ೭ನೇ ಅಧ್ಯಾಯ "ಸಾಹಿತ್ಯ ವಾಸ್ತು ಮತ್ತು ಶಿಲ್ಪ"ದ ಅಧ್ಯಾಯ ಪುಟ ೧೮೭ರಲ್ಲಿ "ಇಮ್ಮಡಿ ಮುದಿಯಪ್ಪನಾಯಕನು ಕೃಷ್ಣಯ್ಯ ಎಂಬ ಹಸ್ತಪ್ರತಿ ಲಿಪಿಗಾರನಿಗೆ ಆಶ್ರಯವನ್ನು ನೀಡಿ ಪುರಾತನಶಾಸ್ತ್ರ ಎಂಬ ಕೃತಿಯನ್ನು ಪ್ರತಿಮಾಡಲು ಆದೇಶವನ್ನು ನೀಡಿದನು. ಕೃಷ್ಣಯ್ಯ ಬರೆದ ಹಸ್ತಪ್ರತಿ ಪ್ರಶಸ್ತಿ ಹೀಗಿದೆ ಎಂದು ಲಿ೦॥ ಹೆಚ್. ದೇವೀರಪ್ಪನವರು "ಕನ್ನಡ ಹಸ್ತಪ್ರತಿಗಳ ಇತಿಹಾಸ"ದಲ್ಲಿ ಕೊಟ್ಟ ಪುಷ್ಪಿಕೆ ಅಥವಾ ಪ್ರಶಸ್ತಿಯನ್ನು ಯಥಾವತ್ತಾಗಿ ಕೊಟ್ಟಿದ್ದಾರೆ. ತಮ್ಮ ಮಹಾಪ್ರಬಂಧದಲ್ಲಿ ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಲು ಕಾರಣ ವಿದ್ವಾನ್ ಎಂ.ಎನ್. ಬಸವರಾಜಯ್ಯನವರ "ಸರ್ವೋದಯ ಪಥ"ದಲ್ಲಿ ಪ್ರಕಟವಾದ ಲೇಖನ ತಮ್ಮ ಡಾ. ಡಿ.ಎನ್. ಯೋಗೀಶ್ವರಪ್ಪ ತಮ್ಮ ಮಹಾಪ್ರಬಂಧದ ಮರುಮುದ್ರಣದಲ್ಲಿ ಈ ಬಗ್ಗೆ ಮತ್ತೆ ವಿಸ್ತೃತವಾಗಿ ಚರ್ಚೆ ಮಾಡಿ ತಿದ್ದುಪಡಿಯನ್ನು ಮಾಡಬಹುದು. ಪ್ರಕಟಿತ ಹಸ್ತಪ್ರತಿ ಪುಷ್ಪಿಕೆಯಲ್ಲಿ ಇಮ್ಮಡಿ ಎಂಬ ಶಬ್ದವೇ ಇಲ್ಲ.



ಹರಿಹರನ ರಗಳೆ ಹಸ್ತಪ್ರತಿ ಈಗ ಯಾರಲ್ಲಿ ಇದೆ ಅನ್ನುವ ಕುತೂಹಲ ಬಹಳ ವರ್ಷದಿಂದ ಅದರ ಬೆನ್ನಹತ್ತಿ ವಿವರವನ್ನು ಸಂಗ್ರಹಿಸುವಾಗ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಹಸ್ತಪ್ರತಿಗಳ "ಮೈಕ್ರೋಫೀಲಂ ಸೂಚಿ"[೭] ಪುಟ ೩೧೨ ರಲ್ಲಿ "ಹರಿಹರನ ರಗಳೆಗಳು" ಶೀರ್ಷಿಕೆಯ ಅಡಿಯಲ್ಲಿ ಈ ಹಸ್ತಪ್ರತಿ ವಿವರ ನೀಡಿದ್ದಾರೆ. ಹಸ್ತಪ್ರತಿ ಪುಷ್ಪಿಕೆಯನ್ನು ಮುದ್ರಿಸಿದ್ದಾರೆ. ಮೈಕ್ರೂಫಿಲಂ ಮಾಡಲು ಶ್ರೀ ಎಸ್. ಬಸಪ್ಪನವರು ಈ ಹಸ್ತಪ್ರತಿ ತಂದ ಪ್ರತಿ ಎನ್ನುವ ಮಾಹಿತಿ ಲಭ್ಯವಿದೆ. ಈಗ ಮೂಲಹಸ್ತಪ್ರತಿಯಾರ ಸಂಗ್ರಹದಲ್ಲಿ ಇದೆಯೋ ಗೊತ್ತಿಲ್ಲ. ಬಹಳ ಬೆಲೆಬಾಳುವ ಅಪರೂಪದ ಹಸ್ತಪ್ರತಿಯು ಮೈಕ್ರೊಫಿಲಂ ರೂಪದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಹಸ್ತಪ್ರತಿ ಭಂಡಾರದಲ್ಲಿ ರಕ್ಷಿಸಲ್ಪಟ್ಟಿದೆ.

**ಆಕರಗಳು :**

೧) ಹಂಪೆಯ ಹರಿಹರದೇವರ ಶರಣ ಚರಿತ ಮಾನಸಂ ಸಂಪಾದಕ : ಎಚ್. ದೇವೀರಪ್ಪ ಎಂ.ಎ., ಪ್ರಕಾಶಕರು ಅಣ್ಣನ ಬಳಗದ ಪರವಾಗಿ ಶ್ರೀ ಗೌರೀಶಂಕರ ಬುಕ್ ಡಿಪೋ ದೇವರಾಜ ಮಾರ್ಕೆಟ್, ಮೈಸೂರು ೧೯೬೮, ಪುಟ ಪೀಠಿಕೆ ಛಿಛಿಥುತ

೨) ಹರಿಹರನ ಕೃತಿಗಳು [ಒಂದು ಸಂಖ್ಯೆ ನಿರ್ಣಯ] ಲೇಖಕ ಹಿರೇಮಲ್ಲೂರ ಈಶ್ವರನ್ ಎಂ.ಎ., ಪಿ.ಹೆಚ್.ಡಿ (ಕ.ಯು.ಧಾ) ಬಿ.ಲಿಟ್ (ಅಕ್ಸನ್) ಡಿ.ಲಿಟ್., (ಲಾಯಿಡನ್) ಸಮಾಜ ವಿಜ್ಞಾನ ಪ್ರಾಧ್ಯಾಫಕರು, ಯಾರ್ಕ್ ವಿಶ್ವವಿದ್ಯಾನಿಲಯ, ಟೊರಾಂಟೊ, ಕ್ಯಾನಡ ಪ್ರಕಾಶಕರು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ ೧೯೭೧ ಮೈಸೂರು ಪುಟ ೪೬

೩) ಹರಿಹರೇತರಕೃತ ವಿರೂಪಾಕ್ಷಾಂಕಿತ "ಶಿವಶರಣ ಸಂಪುಟ" ಸಂಪಾದಕ ಎಚ್. ದೇವೀರಪ್ಪ ಪ್ರಕಾಶಕರು ಪ್ರಕಟಣಾ ಮತ್ತು ಪ್ರಜಾರೋಪನ್ಯಾಸ ವಿಭಾಗ ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು ೧೯೭೩ ಪುಟ ೧೨೮

೪) ಕನ್ನಡ ಹಸ್ತಪ್ರತಿಗಳ ಇತಿಹಾಸ ಲೇಖಕ ಎಚ್. ದೇವೀರಪ್ಪ ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು ೧೯೭೭ ಪುಟ ೫೬

೫) ಸರ್ವೋದಯ ಪಥ ಸಂಪಾದಕ ಜವರೇಗೌಡ ಜಿ. ಪ್ರಕಾಶಕರು ಜಿ.ವಿ.ನಾ ಅಭಿನಂದನಾ ಸಮಿತಿ ಚಿಕ್ಕನಾಯಕನಹಳ್ಳಿ ೧೯೮೨ ಪುಟ ೩೨೦

೬) ಹಾಗಲವಾಡಿ ನಾಯಕರು ಡಾ. ಡಿ.ಎನ್. ಯೋಗೀಶ್ವರಪ್ಪ ಕನ್ನಡ ವಿಶ್ವವಿದ್ಯಾಲಯ ಹಂಪಿ, ಹೊಸಪೇಟೆ ೧೯೯೯ ಪುಟ ೩೬

೭) ಕನ್ನಡ ಹಸ್ತಪ್ರತಿಗಳ "ಮೈಕ್ರೋಫಿಲಂ ಸೂಚಿ" ಸಂಪಾದಕ ಬಿ.ಎಸ್. ಸಣ್ಣಯ್ಯ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೮೮ ಪು೧ ೩೧೨

●

*ಪಂಡಿತ ತಾರಾನಾಥ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ,*
*ತುಮಕೂರು-೫೭೨೧೦೨. ಮೊ : ೯೮೮೮೯ ೯೬೧೯೬*

# ವಚನ – ಗಣಿತ; ಅನುಸಂಧಾನ

**ಮಲ್ಲಿಕಾರ್ಜುನ ಯಾಳವಾರ**

**ಪೀಠಿಕೆ:**

**ವಚನ:** ಅನುಭವದಿಂದ ಅರ್ಜಿಸಿದ ಅನುಭಾವವನ್ನು ಅಭಿವ್ಯಕ್ತಿಸಲು ಶರಣರು ಮತ್ತು ಶರಣೆಯರು ಬಳಸಿದ ಒಂದು ಹೊಸ ಮಾಧ್ಯಮವೇ 'ವಚನ' ಅಥವಾ ಶರಣ–ಶರಣೆಯರ ಅನುಭಾವದ ಅಭಿವ್ಯಕ್ತಿಯೇ 'ವಚನ'.

ವಚನಗಳು ಕನ್ನಡ ಭಾಷೆಗೆ ಮಾತ್ರ ಸೀಮಿತವಾದ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರ, ರಚನಾ ಕ್ರಮದಲ್ಲಿ ವಿಶೇಷವಾಗಿದ್ದು, ಗದ್ಯವೂ ಅಲ್ಲದ ಪದ್ಯವೂ ಅಲ್ಲದ ಛಂದೋಮುಕ್ತವಾಗಿರುವ ವಚನಗಳು ಹೊಸ ಕಾವ್ಯಪ್ರಕಾರದಂತೆ ಇದ್ದು, ಭಾವಗೀತೆಯ ಗುಣವನ್ನು ಹೊಂದಿವೆ. ವಚನಗಳ ಭಾಷೆಯು ಕನ್ನಡ ರಸಯೋಗದ ಲಿಂಗಭಾಷೆಯಾಗಿದ್ದು ಇದಕ್ಕೆ 'ಶರಣಗನ್ನಡ' ಎನ್ನುವುದು ಸೂಕ್ತ.

ಶಿಷ್ಟಭಾಷೆಯ ಕಣಕದೊಳಗೆ ದೇಶೀಯ ಭಾಷೆಯ ಹೂರಣ ತುಂಬಿ, ಸಂಸ್ಕೃತದ ಎಣ್ಣೆ ಹಚ್ಚಿ, ಅನುಭವದ ಲಟ್ಟಣಿಗೆಯಿಂದ ಲಟ್ಟಿಸಿ ಲಟ್ಟಿಸಿ ಒಡಂಬಡುವ ಒಲೆಯಲ್ಲಿ ಕ್ರಿಯಾ ಅಗ್ನಿ ಉರಿಸಿ, ಸದ್ಭಕ್ತಿಯ ತವೆಯನ್ನಿಟ್ಟು, ಅದರಲ್ಲಿ ಅನುಭಾವದ ಹೋಳಿಗೆಯನ್ನು ಬೇಯಿಸಿ ಬೇಯಿಸಿ, ಶರಣ–ಶರಣೆಯರು ನಮಗೆ ಉಣಬಡಿಸಿದ್ದಾರೆ. ಆದ್ದರಿಂದ "ಲಿಂಗಮೆಚ್ಚಿ ಅಹುದಹುದು" ಎನ್ನುವಂತಿವೆ ವಚನಗಳು.

**ಗಣಿತ:** "ಅಂಕಿ–ಸಂಖ್ಯೆ, ಆಕಾರ ಮತ್ತು ದೃಶ್ಯಗಳನ್ನು ಅಭ್ಯಸಿಸುವ ವಿಜ್ಞಾನವೇ ಗಣಿತ" ಗಣಿತ ಒಂದು ಅಮೂರ್ತ ವಿಷಯ, ಅಮೂರ್ತ ಅನುಭವವನ್ನು ಅಂಕೆ–ಸಂಖ್ಯೆಗಳು ನಿಖರವಾಗಿ ಮೂರ್ತಗೊಳಿಸುತ್ತವೆ. ನಿಸರ್ಗದ ಜೊತೆ ವೀಕ್ಷಣೆ, ಪ್ರಯೋಗ ಮತ್ತು ತಾರ್ಕಿಕವಾಗಿ ಚಿಂತಿಸಿದಾಗ ದೊರೆಯುವ ಜ್ಞಾನ 'ವಿಜ್ಞಾನ'. ಪ್ರಕೃತಿಯ ರಹಸ್ಯವನ್ನು ಪಂಚೇಂದ್ರಯಗಳಿಂದ ತಿಳಿದುಕೊಳ್ಳುತ್ತೇವೆ. ಆದರೆ ನಮಗರಿವಿಲ್ಲದೆ ಜ್ಞಾನ ಸಂಗ್ರಹ ಮಾಡಿಕೊಳ್ಳುತ್ತೇವೆ. ಆದ್ದರಿಂದ ವಿಜ್ಞಾನಿಯು ಸತ್ಯಾನ್ವೇಷಕ. ಅಂದರೆ ಗಣಿತಜ್ಞನೂ ಸತ್ಯಾನ್ವೇಷಕ.

ಗಣಿತದಲ್ಲಿ ಪ್ರಪಂಚಕ್ಕೆ ಸಂಬಂಧಿಸಿದ ಲೆಕ್ಕ ಇದ್ದರೆ, ವಚನಗಳಲ್ಲಿ ಪಾರಮಾರ್ಥಕ್ಕೆ ಸಂಬಂಧಿಸಿದ ಲೆಕ್ಕಗಳುಂಟು. ಬಾಹ್ಯ ಪ್ರಪಂಚದ ಲೆಕ್ಕ ತೆಗೆದುಕೊಳ್ಳುವಾಗ ಅಂತರಂಗದ ಪಾರಮಾರ್ಥಿಕ ಲೆಕ್ಕ ಮರೆಯಕೂಡದು.

೧೨ನೇ ಶತಮಾನದ ಶರಣ–ಶರಣೆಯರ ವಚನಗಳನ್ನು ನಾವಿಂದು ೨೧ನೇ ಶತಮಾನದಲ್ಲಿ ವಿವಿಧ ದೃಷ್ಟಿ, ವಿವಿಧ ಆಯಾಮಗಳಲ್ಲಿ ಅವಲೋಕಿಸಿದಾಗ ವಚನಗಳ ಅಂತರಂಗ ಬಹು ವಿಶಾಲವಾಗಿ ಕಾಣುತ್ತದೆ. ವಚನಗಳ ಅಭಿವ್ಯಕ್ತಿ ವಿಶಿಷ್ಟವಾಗಿದ್ದರಿಂದಲೇ ಪ್ರೊ. ಸಂಗಮೇಶ ಸವದತ್ತಿಮಠ ಅವರು: "ವಚನಗಳ ಭಾವ, ಅಂತರಾಳ ಅರಿಯಬೇಕಾದರೆ ಅವುಗಳನ್ನು ವಿಷಯಕ್ಕನುಸಾರ ಹೊಂದಿಸಿಕೊಂಡು ಅಧ್ಯಯನ ಮಾಡಬೇಕು." ಎಂದು ಹೇಳಿದ್ದಾರೆ.

ಈಗಾಗಲೇ ಹಲವು ವಿಶ್ಲೇಷಕರು ವಚನಗಳಲ್ಲಿ ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರ, ವೈದ್ಯಶಾಸ್ತ್ರ ಇತ್ಯಾದಿ ವಿಷಯಗಳ ಕುರಿತು ವಿಶ್ಲೇಷಿಸಿದ್ದಾರೆ. ಹಾಗೆಯೇ



ಗಣಿತಶಾಸ್ತ್ರಕ್ಕನುಸರಿಸಿ ವಚನಗಳನ್ನು ಅಧ್ಯಯನ ಮಾಡಬಹುದಾಗಿದೆ. ಶರಣ–ಶರಣೆಯರು ತಮ್ಮ ವಚನಗಳಲ್ಲಿ ಅಂಕಿ–ಸಂಖ್ಯೆಗಳನ್ನು ರೂಪಕವಾಗಿ ಅಥವಾ ದೃಷ್ಟಾಂತವಾಗಿಟ್ಟುಕೊಂಡು ಆಧ್ಯಾತ್ಮದ ಅರಿವು ಮೂಡಿಸಲು ಪ್ರಯತ್ನಿಸಿದ್ದಾರೆ. ಉದಾಹರಣೆಗಾಗಿ:

**ನವ ಸೂತ್ರ ಪಟ್ಟಣಕ್ಕೆ ನವದ್ವಾರ ಬೀದಿಯೊಳು,**
**ನವ ಲಿಂಗ ಸ್ಥಾವರಕ್ಕೆ ನವ ಕಳಸವು,**
**ನವ ದೀಪ, ನವ ಧೂಪ, ನವ ಮಂತ್ರ,**
**ನವ ಪೂಜೆ, ನವಜಪ,**
**ನಮೋನಮೋ ಎನುತರ್ದೆನು ಕೂಡಲ ಚನ್ನಸಂಗಯ್ಯಾ.**

ಚನ್ನಬಸವಣ್ಣನವರ ಈ ವಚನ ಸಂಖ್ಯಾ ಸಂಕೇತ ಭಾಷೆಯಾಗಿದೆ. ಇಲ್ಲಿ 'ಒಂಬತ್ತು' ಎಂಬ ಅಂಕೆ ಬಳಸಿ ಒಂಬತ್ತು ವಿಧದ ಕ್ರಿಯೆಗಳಿಂದ 'ಲಿಂಗಾಂಗ ಸಾಮರಸ್ಯ'ವನ್ನು ತಿಳಿಸುತ್ತಾರೆ. '೯' ಶರಣರ ಭಾಗ್ಯದ ಅಂಕಿ ಎಂದು ಹೇಳಲಾಗುತ್ತದೆ. ಹಾಗೆಯೇ, ಬಸವಣ್ಣನವರ ಒಂದು ವಚನ ಹೀಗಿದೆ:

**ಹದಿನಾರಿದ್ದಡೆ ಎಂಟು ಮಾಡುವ ಸಂಗಯ್ಯದೇವರು**
**ಎಂಟು ಇದ್ದಡೆ ನಾಲ್ಕು ಮಡುವ ಸಂಗಯ್ಯದೇವರು,**
**ನಾಲ್ಕು ಇದ್ದಡೆ ಎರಡು ಮಾಡುವ ಸಂಗಯ್ಯದೇವರು,**
**ಎರಡಿದ್ದಡೆ ಒಂದು ಮಾಡುವ ಸಂಗಯ್ಯದೇವರು,**
**ಆ ಒಂದು ಇಲ್ಲವೆಂದು ಮಾಡುವ ಸಂಗಯ್ಯದೇವರು,**
**ತಿರುಕಿನ ಶೋಭಿತನ ಮಾಡುವ ಸಂಗಯ್ಯದೇವರು,**
**ತಿರುಹೋದಡೆ ಹುಟ್ಟಿದೆನೆನಿಸುವ ಸಂಗಯ್ಯದೇವರು,**
**ಇದಾವುದಕ್ಕೂ ಸೆಡೆಯದಿದ್ದಡೆ**
**ಕೂಡಲಸಂಗಮದೇವರು ತನ್ನಂತೆ ಮಾಡುವ.**

ಇಲ್ಲಿ ಬಸವಣ್ಣನವರು ಗಣಿತದ 'ಪಂಚಕ್ರಿಯೆ'ಯಿಂದ ಶಿವದರ್ಶನ ಮಾಡುವ ಅಂದರೆ ಲಿಂಗಾಂಗ ಸಾಮರಸ್ಯದ ಸಾಧ್ಯತೆಯನ್ನು ತಿಳಿಸುತ್ತಾರೆ. ಈ ವಚನದಲ್ಲಿ ಗಣಿತದ 'ಅನುಲೋಮ' ಮತ್ತು 'ವಿಲೋಮ' ಕ್ರಿಯೆಯನ್ನು ಬಸವಣ್ಣನವರು ಹೇಳುತ್ತಾರೆ.

ಶರಣರು ತಮ್ಮ ವಚನಗಳಲ್ಲಿ ಸಂಖ್ಯಾಪದಗಳನ್ನು ಅಥವಾ ಸಂಖ್ಯಾ ಶಬ್ದಗಳನ್ನು ಉಪಯೋಗಿಸಿ ಅಂಗ–ಆತ್ಮ ಒಂದಾಗುವ ಪರಿಯನ್ನು ಅಂಕೆ–ಸಂಖ್ಯೆಗಳ ರೂಪಕ (ದೃಷ್ಟಾಂತ)ಗಳಿಂದ ಅರಿವು ಮೂಡಿಸಲು ಪ್ರಯತ್ನಿಸಿದ್ದಾರೆಂದು ನಮಗನಿಸುತ್ತಿದೆ. ಇದೇ 'ಶಿವಯೋಗಾನುಸಂಧಾನ' ಅಥವಾ 'ಲಿಂಗಾಂಗ ಸಾಮರಸ್ಯ' ಆದ್ದರಿಂದ ಶರಣರು ಶಬ್ದಲೆಕ್ಕಿಗರು. ಲಿಂಗಾಂಗ ಸಾಮರಸ್ಯ ಸಾಧಿಸಲು ಹಲವು ಶರಣ–ಶರಣೆಯರು ತಮ್ಮ ವಚನಗಳಲ್ಲಿ ಅಂಗದಲ್ಲಿಯ ಆರು ಮೆಟ್ಟಿಲುಗಳನ್ನು, ಒಂಬತ್ತು ಮೆಟ್ಟಿಲುಗಳನ್ನು ಇನ್ನು ಕೆಲವರು ಹನ್ನೆರಡು ಮೆಟ್ಟಿಲುಗಳನ್ನು ಗುರುತಿಸಿದ್ದಾರೆ. ಈ ಮೆಟ್ಟಿಲುಗಳಿಗೆ ಶರಣು 'ಚಕ್ರಗಳು' ಅಥವಾ 'ಪದ್ಮಗಳು' ಎಂದು ಕರೆದರು. ಅಂಗದಲ್ಲಿಯ ಚಕ್ರಗಳ ಸ್ಥಾನಗಳನ್ನು ಹಾಗೂ ಆ ಸ್ಥಾನಗಳಲ್ಲಿಯ ರೇಖಾಗಣಿತೀಯ ಆಕೃತಿಗಳನ್ನು ತಮ್ಮ ವಚನದಲ್ಲಿ ಸೂಚಿಸಿದ್ದಾರೆ. ಉದಾಹರಣೆಗಾಗಿ ಪ್ರಸಾದಿ ಭೋಗಣ್ಣನ ವಚನ ಸಂ. ೭೬ ಮತ್ತು ಭಿಕ್ಷುಕ ಸಂಗಯ್ಯ ವಚನ ಸಂ. ೧೩ ಗಳಲ್ಲಿ ತಿಳಿಸಲಾದ ಚಕ್ರಗಳು, ಅವುಗಳ ಸ್ಥಾನ ಮತ್ತು ಅಲ್ಲಿಯ ಆಕೃತಿಗಳನ್ನು ಕೆಳಗೆ ಕೊಡಲಾಗಿದೆ.

| ಚಕ್ರಗಳು | ಸ್ಥಾನಗಳು | ಆಕೃತಿಗಳು |
|---|---|---|
| ೧. ಆಧಾರಚಕ್ರ | – ಗುದ – | ಚತುರ್ಭುಜ |
| ೨. ಸ್ವಾಧಿಷ್ಠಾನ ಚಕ್ರ | – ಜನನೇಂದ್ರಿಯದ ಮೇಲ್ಭಾಗ– | ಧನುರಾಕೃತಿ |
| ೩. ಮಣಿಪೂರಕ ಚಕ್ರ | – ನಾಭಿ – | ತ್ರಿಭುಜ |
| ೪. ಅನಾಹತ ಚಕ್ರ | – ಹೃದಯ – | ಷಟ್‌ಕೋನ ಚತುರ್ಭುಜ |
| ೫. ವಿಶುದ್ಧ ಚಕ್ರ | – ಕಂಠ – | ವರ್ತುಳ |
| ೬. ಆಜ್ಞಾಚಕ್ರ | – ಭ್ರೂಮಧ್ಯ – | ತಮಂಧಾಕೃತಿ |
| ೭. ಶಿಖಾಚಕ್ರ | – ಮುಂದೆಲೆ – | ಅರ್ಧಚಂದ್ರಾಕೃತಿ |
| ೮. ಪಶ್ಚಿಮ ಚಕ್ರ | – ಹಿಂದೆಲೆಯ ಎಡಭಾಗ– | ದರ್ಪಣಾಕೃತಿ |
| ೯. ಬ್ರಹ್ಮಚಕ್ರ | – ನೆತ್ತಿ – | ದಂಡಾಕೃತಿ |

ಚಕ್ರಸ್ಥಾನಗಳು ಸಾಂಕೇತಿಕ ಭಾಷೆಯಲ್ಲಿ ಚೈತನ್ಯ ಕೇಂದ್ರಗಳಾಗಿವೆ. ಅವು ಇಂದ್ರಿಯಗೋಚರ ವಾಗಿದ್ದರೂ ಶಿವಯೋಗಿಗಳು ಅವುಗಳಿಗೆ ಆಕಾರ (ಆಕೃತಿ) ಸೂಚಿಸಿದ್ದು ಅದು ಅವರ ಅನುಭಾವಜನ್ಯ. ಕೊನೆಯ ಮೆಟ್ಟಿಲು ತಲುಪಿದಾಗ ಸಾಧಕನಿಗೆ 'ಶಿವ ಸಾಕ್ಷಾತ್ಕಾರ', 'ಶಿವ' ಎಂಬುದು ಶರಣರಿಗೆ ಪರಾತ್ಪರವಸ್ತು ಅಂದರೆ 'ಶೂನ್ಯ' ಅಥವಾ 'ಬಯಲು' ಎಂದು ಕರೆದರು. ಅದು ಸತ್ಯವೂ ಹೌದು . ಯಾಕೆಂದರೆ 'ಸತ್ಯಂ ಶಿವಂ ಸುಂದರಂ'.

ಶಿವ = ಸತ್ಯ – I

ಹಾಗೇಯೇ ಗಣಿತಜ್ಞರು ಗಣಿತ ಸಿದ್ಧಾಂತಗಳನ್ನು ಅಥವಾ ಪ್ರಮೇಯಗಳನ್ನು ಸಾಧಿಸಲು ಕೆಲವು ಮೆಟ್ಟಿಲುಗಳನ್ನು ಉಪಯೋಗಿಸುತ್ತಾರೆ.

ಉದಾಹರಣೆ:

ಅ) ರೇಖಾಗಣಿತದಲ್ಲಿ ಯಾವುದೇ ಒಂದು ಪ್ರಮೇಯ ಸಾಧಿಸಲು ನಿರೂಪಣೆ, ಆಕೃತಿ, ದತ್ತ, ಸಾಧನೀಯ, ರಚನೆ ಮತ್ತು ಸಾಧನೆ ಎಂಬ ಆರು ಮೆಟ್ಟಿಲುಗಳ ಮುಖಾಂತರ ಸಾಧಿಸಬೇಕಾಗಿರುತ್ತದೆ.

ಬ) ೨+೨=೪      ೨x೨=೪

೨-೨=೦      ೨ ೨=೧

ಮೇಲಿನ ಗಣಿತ ಕ್ರಿಯೆಗಳ ಸಂದರ್ಭದಲ್ಲಿ ಸಿಕ್ಕ ಫಲಿತಾಂಶಗಳು ಸತ್ಯವಲ್ಲವೇ?

ಗಣಿತ = ಸತ್ಯ – II

I ಮತ್ತು II ರಿಂದ

ಗಣಿತ = ಶಿವ

ಇದು ತಾರ್ಕಿಕ ಸಿದ್ಧಾಂತವಾದರೂ ತರ್ಕಶಾಸ್ತ್ರದಲ್ಲಿ ತತ್ವಜ್ಞಾನ ಇದೆ. ಆದ್ದರಿಂದ ಶರಣರು, ಅಭಿವ್ಯಕ್ತಿ ಒಂದು ವಿಧಾನವಾಗಿ ತಮ್ಮ ವಚನಗಳಲ್ಲಿ ಸಂಖ್ಯಾವಾಚಕಗಳನ್ನು ಒಂದು ರೂಪಕವಾಗಿ ಅಥವಾ ದೃಷ್ಟಾಂತದಂತೆ ಬಳಸಿರಬಹುದು.

**ವಚನಗಳಲ್ಲಿ ಶೂನ್ಯ**

**ಗಣಿತ ಒಂದಕ್ಕೆ ಪೂಜೆ, ಒಂದೆರಡು ಮೂರಾದಲ್ಲಿ,**

**ಹತ್ತು, ಶತ, ಸಹಸ್ರ ವೆನಿಸಿತ್ತಯ್ಯಾ.**



**ಪರಾತ್ಪರವಸ್ತು ಉಪಾಧಿ ವಶದಿಂದ,**

**ಈಶ್ವರ, ಜೀವತ್ವ, ಪ್ರಕೃತಿ– ಮೊದಲಾದ ಇಂದ್ರಜಾಲವಾಯಿತ್ತು ನೋಡಾ**

**ಕಪಿಲಸಿದ್ಧ ಮಲ್ಲಿಕಾರ್ಜುನಾ – ಸಿದ್ಧರಾಮೇಶ್ವರ**

'ಪರಾತತ್ಪವಸ್ತು' ಅಥವಾ ಪರಶಿವ. ಅಂದರೆ 'ಶೂನ್ಯ'. ಪರಾತತ್ಪವು ಲೌಕಿಕ ಬಂಧನದಿಂದ (ಉಪಾಧಿ), ನಾಮ (ಈಶತ್ವ), ರೂಪ (ಜೀವತ್ವ) ಮತ್ತು ಕ್ರಿಯಾತತ್ವ (ಪ್ರಕೃತಿ)ಗಳಿಂದ ಚಮತ್ಕಾರಿಕವಾಗಿ (ಇಂದ್ರಜಾಲ) ಕಾಣಬಹುದು.

ಇಲ್ಲಿ ಸಿದ್ಧರಾಮೇಶ್ವರರು ಅಂಕೆ-ಸಂಖ್ಯೆಗಳ ಸ್ಥಾನಬೆಲೆ ಸೂಚಿಸಿದ್ದಾರೆ. 'ಪೂಜೆ' ಎಂಬ ಪದವನ್ನು 'ಪೂಜಿ' (ಸೊನ್ನೆ) ಎಂಬ ಆಡುಭಾಷೆಯ ಪದವೆಂದು ಗ್ರಹಿಸಬೇಕು. ಸಿದ್ಧರಾಮೇಶ್ವರರ ಪ್ರಕಾರ,

| | | |
|---|---|---|
| ೧ ರ ಮುಂದೆ ಒಂದು ಪೂಜಿ ಅಂದರೆ ೧೦ | – | ದಶ |
| ೧ ರ ಮುಂದೆ ಎರಡು ಪೂಜಿ ಅಂದರೆ ೧೦೦ | – | ಶತ |
| ೧ ರ ಮುಂದೆ ಮೂರು ಪೂಜಿ ಅಂದರೆ ೧೦ | – | ಸಹಸ್ರ |

ಇಲ್ಲಿ ೧ ರ ಮುಂದೆ ಶೂನ್ಯ ಹಚ್ಚಿದಂತೆ ಸಂಖ್ಯಾಬೆಲೆ ಹೆಚ್ಚುವಂತೆ, ಪರತತ್ವ ಅನುಗ್ರಹ ಹೆಚ್ಚಿದಂತೆ ಸಾಧಕನ ವ್ಯಕ್ತಿತ್ವ ಹೆಚ್ಚುತ್ತದೆಂಬುದು ಸಿದ್ಧರಾಮೇಶ್ವರರ ಗಣಿತ. ಶರಣರಿಗೆ ಗಣಿತದ 'ದಶಮಾನಪದ್ಧತಿ' ತಿಳಿದಿತ್ತೆಂಬುದು ನಮಗರಿವಾಗುತ್ತದೆ. ಸರ್ವರನ್ನೂ ತನ್ನಲ್ಲಿ ಒಳಗೊಂಡು ಅದಕ್ಕೆ ಅತೀತನಾಗಿ ನಿಂತು ನೋಡುವ ಚಿದ್ವಸ್ತುವೇ 'ಶೂನ್ಯ' ಆದ್ದರಿಂದ ಶೂನ್ಯಕ್ಕೊಂದು ಅಸ್ತಿತ್ವ ಇದೆ, ಶಕ್ತಿ ಇದೆ. ಅದೇ ಪರಶಿವ.

**ಶೂನ್ಯದ ಕುರಿತು ಇನ್ನೊಂದು ವಚನವನ್ನು ಅವಲೋಕಿಸಬಹುದು:**

**ಅರಿವು ಮರೆವೆಯೊಳಡಗಿ ಮರೆವೆ ಅರಿವಿನೊಳಡಗಿ**

**ತೆರಹಿಲ್ಲದಿರ್ದನೆಂಬ ಹಮ್ಮಿದೇನೋ ಹಮ್ಮಿದೇನೋ?**

**ಬ್ರಹ್ಮದ್ ಬ್ರಹ್ಮನ ನುಂಗಿ ಮತ್ತಾಪರಬ್ರಹ್ಮನು ತಾನೆಂದು,**

**ಹಮ್ಮಿದೇನೋ ಹಮ್ಮಿದೇನೋ ?**

**ಆದಿ ಶೂನ್ಯವು ಶೂನ್ಯ ಮಧ್ಯ ಶೂನ್ಯವು ಶೂನ್ಯ,**

**ಅಂತ್ಯ ಶೂನ್ಯವು ಶೂನ್ಯ.**

**ಶೂನ್ಯವಾದ ಬಳಿಕ ಅಲ್ಲಿಂದತ್ತನಿಂದ ನಿಲವನಾರು ಬಲ್ಲರು ಹೇಳಾ ?**

**ಬಯಲು ಚಿತ್ರಿಸಿದ ಚಿತ್ರವನು ಬಯಲನರಿದಂತೆ**

**ಕೂಡಲಸಂಗಮದೇವಾ. – ಬಸವಣ್ಣ**

ಇಲ್ಲಿ ಬಸವಣ್ಣನವರ ಶೂನ್ಯ ಅದ್ಭುತವಾದುದು. ಇದನ್ನು ಅನುಭವಿಸಿಯೇ ಅರಿಯಬೇಕು. ಅರಿವಿನ ಹಿಂದೆ ಮರೆವು, ಮರೆವು ಅರಿವಿನಲ್ಲಿ, ಅರಿವು ಮರೆವಿಲ್ಲಿ ಅಡಗಿದ ಚಿದ್ವಸ್ತುವೇ ಪರಶಿವ. ಅದು ಪರಿಪೂರ್ಣ, ಅಂದರೆ 'ಶೂನ್ಯ'. ಶೂನ್ಯವು ಜಾಗೃತಿಯಲ್ಲಿ, ಸ್ವಪ್ನದಲ್ಲಿ ಮತ್ತು ಸುಷುಪ್ತಿಯಲ್ಲಿಯೂ ಇದೆ. "ಆದಿಶೂನ್ಯವು ಶೂನ್ಯ, ಮಧ್ಯ ಶೂನ್ಯವು ಶೂನ್ಯ, ಅಂತ್ಯ ಶೂನ್ಯವು ಶೂನ್ಯ" ಎಂದು ಹೇಳುವಲ್ಲಿ 'ಮಹಾಶೂನ್ಯ' ಎಂದು ತಿಳಿಯಬೇಕು. ಜಗತ್ತು ಇಲ್ಲದಿದ್ದಾಗ ಪರಶಿವನೊಬ್ಬನೇ ಇದ್ದ. ಅದುವೇ ಶೂನ್ಯ, ನಿಜಶೂನ್ಯ. ಜಗದ ಸೃಷ್ಟಿಯ ನಂತರ ಶಿವನನ್ನು ಸೃಷ್ಟಿಕರ್ತ, ಸ್ಥಿತಿಕರ್ತ, ಲಯಕರ್ತ ಎಂದು ಹೇಳಲಾಗುತ್ತಿದೆ. ಶೂನ್ಯವೆಂಬುದೊಂದು ಚಿದ್ವಸ್ತು. ಅದು 'ಅನಾತ್ಮ'ವಲ್ಲ. ನುಡಿಯಡಗಿದ 'ನಿಃಶಬ್ದ'. ಅದುವೇ

'ಬಯಲು'.

ಕ್ರಿ.ಪೂ.ಕ್ಕಿಂತ ಮೊದಲೇ ಭಾರತೀಯರಿಗೆ ಶೂನ್ಯದ ಪರಿಜ್ಞಾನವಿತ್ತೆಂದು ಗಣಿತಶಾಸ್ತ್ರ ಚರಿತ್ರೆಯಿಂದ ತಿಳಿದುಬರುತ್ತದೆ. ಪಿಂಗಳನು (ಕ್ರಿ.ಪೂ. ೨೦೦) ತನ್ನ 'ಛಂದಸೂತ್ರ'ದಲ್ಲಿ ಶೂನ್ಯ ಬಳಸಿದ್ದಾನೆ. ಕೌಟಿಲ್ಯನು (ಕ್ರಿ.ಶ. ೧ನೇ ಶತಮಾನ) ತನ್ನ ಅರ್ಥಶಾಸ್ತ್ರದಲ್ಲಿ ಶೂನ್ಯ ಬಳಸಿದ್ದಾನೆ. ಬ್ರಹ್ಮಗುಪ್ತ (ಕ್ರಿ.ಶ. ೫೯೮-೬೬೦) ತನ್ನ 'ಬ್ರಹ್ಮಸ್ಫುಟ ಸಿದ್ಧಾಂತ'ದಲ್ಲಿ ಮತ್ತು ಮಹಾವೀರಾಚಾರ್ಯ (ಕ್ರಿ.ಶ. ೮೫೦) ತನ್ನ 'ಗಣಿತಸಾರ ಸಂಗ್ರಹ'ದಲ್ಲಿ ಶೂನ್ಯಕ್ಕೆ ಸಂಬಂಧಿಸಿದ ಗಣಿತ ಕ್ರಿಯೆಗಳನ್ನು ಹೀಗೆ ಹೇಳಿದ್ದಾರೆ:

$a + 0 = a$ $\quad$ $a - 0 = a$

$a \times 0 = 0$ $\quad$ $a \div 0 = 0$

ಹಾಗೆಯೇ ದ್ವಿತೀಯ ಭಾಸ್ಕರಾಚಾರ್ಯ (ಕ್ರಿ.ಶ. ೧೧೧೪-೧೧೮೫) ತನ್ನ 'ಸಿದ್ಧಾಂತ ಶಿರೋಮಣಿ' ಗ್ರಂಥದ 'ಲೀಲಾವತಿ' ಎಂಬ ವಿಭಾಗದಲ್ಲಿ 'ಶೂನ್ಯ ಪರಿಕರ್ಮಾಷ್ಟಕ' ಎಂಬ ತಲೆಬರಹದಡಿಯಲ್ಲಿ ಕೆಳಗಿನಂತೆ ವಿವರಿಸಿದ್ದಾನೆ:

$$a - 0 = a, \quad a - 0 = a, \quad a \times 0 = 0 \quad a \div 0 = 0$$

$$\frac{a \times 0}{0} = \frac{0}{0}, \quad 0^2 = 0 \sqrt{0^2} = 0. \quad 0^3 = 0. \quad \sqrt[3]{0^3} = 0$$

ಇಲ್ಲಿ $a \div 0 = 0$ ಮತ್ತು $\frac{a \times 0}{0} = \frac{0}{0}$ ಎಂಬ ಕ್ರಿಯೆಗಳು ಸರಿಯಲ್ಲ. ನವೀನ ಬೀಜಗಣಿತದಲ್ಲಿ $\frac{a}{0} = \infty$ (ಅನಂತ) ಮತ್ತು $\frac{a \times 0}{0} = \frac{0}{0}$

ಇದು ಶೂನ್ಯವಾಗಬಹುದು ಇಲ್ಲವೆ ಒಂದು ರಾಶಿಯಾದರೂ ಆಗಬಹುದೆಂದು ನಿರ್ದಿಷ್ಟವಾಗಿ ಹೇಳಲು ಬರುವುದಿಲ್ಲ. ಇದಕ್ಕೆ 'ಅನಿರ್ಧಿಷ್ಟ' ಎಂದು ಕರೆಯುತ್ತಾರೆ. ಇತ್ತೀಚಿನ ಗಣಿತಜ್ಞರು ಇದನ್ನು ಒಪ್ಪುವುದಿಲ್ಲ. ಯಾಕೆಂದರೆ ಯಾವುದೇ ಸಂಖ್ಯೆಯನ್ನು ಸೊನ್ನೆಯಿಂದ ಭಾಗಿಸಲು ಸಾಧ್ಯವಿಲ್ಲವೆಂಬುದು ಅವರ ವಾದ. ಶೂನ್ಯವನ್ನು ಒಂದು ಬಿಂದು (.)ವಾಗಿ ಮತ್ತು ಒಂದು ಸಂಕೇತವಾಗಿ ಬಳಸಿದ್ದು ಭಾರತೀಯರೇ ಎಂಬುದು ಗಮನಾರ್ಹ.

ಮೇಲಿನ ಎಲ್ಲ ಗಣಿತ ಕ್ರಿಯೆಗಳಿಂದ ಬಾಹ್ಯದಲ್ಲಿ ವಚನ (ಕಾವ್ಯ) ಮತ್ತು ಗಣಿತ ಪರಸ್ಪರ ವಿರುದ್ಧ ದಿಕ್ಕು ಎಂದು ಕೆಲವರು ಭಾವಿಸಿದರೂ ಅವು ಪರಸ್ಪರ 'ಗುರು-ಲಘು' ಮಾತ್ರಾಗಣಗಳ ಮೂಲಕ 'ಛಂದಸ್ಸು' ಎಂಬ ಬಿಂದುವಿನಲ್ಲಿ ಸಂಪಾತವಾಗುತ್ತವೆ. ಶೂನ್ಯ ಶಬ್ದವು ಧ್ವನಿ ಸಮನ್ವಿತ ಕಾವ್ಯದಂತಿದೆ. ಆದ್ದರಿಂದ ತೋಂಟದ ಸಿದ್ಧಲಿಂಗೇಶ್ವರ ಶಿವಯೋಗಿಗಳು "ಅಕ್ಷರವೆಂಬುದು ಲೆಕ್ಕದೊಳಗು, ಲೆಕ್ಕವೆಂಬುದು ನೆನಹಿನೊಳಗು" ಎಂದು ಹೇಳಿದ್ದಾರೆ.

*'ಶಿವಕೃಪಾ', ೨೧ನೆ ಅಡ್ಡರಸ್ತೆ, ವಿದ್ಯಾಗಿರಿ, ಬಾಗಲಕೋಟೆ- ೫೮೭ ೧೦೨*
*೯೪೪೮೦ ೪೦೯೯೮*





# ಅಕ್ಕನ ವಚನಗಳ ನಿರ್ವಚನ

ಬಿದರಹಳ್ಳಿ ನರಸಿಂಹಮೂರ್ತಿ

**ಫಲ ಒಳಗೆ ಪಕ್ವವಾಗಿಯಲ್ಲದೆ**
**ಹೊರಗಣ ಸಿಪ್ಪೆ ಒಪ್ಪಗೆಡದು!**
**ಕಾಮನ ಮುದ್ರೆಯಕಂಡು ನಿಮಗೆ ನೋವಾದೀತೆಂದು**
**ಆ ಭಾವದಿಂದ ಮುಚ್ಚಿದೆ! ಇದಕೆ ನೋವೇಕೆ?**
**ಕಾಡದಿರಣ್ಣಚೆನ್ನಮಲ್ಲಿಕಾರ್ಜುನದೇವನ ಒಳಗಾದವಳ!**

(ಅಕ್ಕನ ವಚನಗಳು, ಸಂ: ಡಾ.ಎಲ್.ಬಿ, ೧೯೭೭, ಪುಟ ೧೧೭-೮)

ಶಬ್ದದ ಲಜ್ಜೆ ಸುಲಿದೆಸೆದು ದಿಗಂಬರ ಭಾಷೆ ನುಡಿಸುವ ಅಕ್ಕನಿಗೆ ಸರಿಸಾಟಿಯಾದ ಸ್ವಾನುಭಾವಿಗಳು ಜಗತ್ತಿನ ಮತ್ತಾವ ಸಂಸ್ಕೃತಿಯಲ್ಲೂ ಸಿಕ್ಕಲಾರರು. ಹದಿಹರೆಯದ ಅಷ್ಟು ಪುಟ್ಟ ವಯಸ್ಸಿನಲ್ಲೆ ಅಕ್ಕನಿಗೆ ಅಷ್ಟು ದಿಟ್ಟ ಭಾವಾಭಿವ್ಯಕ್ತಿ ಸಾಧ್ಯವಾಯಿತೆಂದರೆ ಅವಳ ಯೋಗಸಿದ್ಧಿ ಗೌರಿಶಂಕರ ಶಿಖರ ಅದೆಷ್ಟು ಉನ್ನತವೂ ಏಕಾಗ್ರವೂ ಆಗಿದ್ದಿರಬೇಕು! ಬರಿ ಶುಷ್ಕಭಾಷಿಕ ಪಾಂಡಿತ್ಯ ಒಣ ವ್ಯಾಕರಣ ವ್ಯಾಯಾಮ ಛಂದೋ ಬಂಧನದಿಂದ ಅಂಥ ಪರಿಣಾಮಿ ಅನುಭಾವ ಕಾವ್ಯಚಿಮ್ಮೀತೆ? ಶಿವಗಣಪ್ರಸಾದಿ ಮಹಾದೇವಯ್ಯ ಕಟ್ಟಿಕೊಟ್ಟ ಅಸಾಧ್ಯ ಶರಣೆ-ಶರಣರ ಮಹಾನುಭಾವ ನಾಟಕ 'ಪ್ರಭುದೇವರ ಶೂನ್ಯಸಂಪಾದನೆ'ಯ ಬೆಡಗಿನ ಸಂವಾದದಲ್ಲಿ ಅಕ್ಕನಿಂದ ಸಟಕ್ಕೆಂದು ಹೊಮ್ಮಿದ ಸಹಜ ವಚನವಿದು. ಇದರಲ್ಲಿ ಜೈವಿಕ\ನೈಸರ್ಗಿಕ ವಿಜ್ಞಾನದ ವಾಸ್ತವಿಕ ಸತ್ಯವೂ ಬೆಸೆದುಕೊಂಡು ಧ್ವನ್ಯಾರ್ಥ ಅಳವಟ್ಟಿದೆ. ಮರಬಿಟ್ಟ ಹೂ ಹೀಚಾಗಿ ಕಸುಗಾಯಿದೋರು ಗಾಯಿಯಾಗುವವರೆಗೆ ಮೇಲು ಸಿಪ್ಪೆ ಬಿಗಿಯಾಗಿ ಹಸಿರಾಗಿಯೆ ಇರುತ್ತದೆ. ಒಳತಿರುಳುಮಾಗಿ ಮೃದುವಾಗಿ ರುಚಿಮಾಧುರ್ಯಕ್ಕೆ ತಿರುಗಿದಾಗ ಹೊರ ಸಿಪ್ಪೆ ಹಂತಹಂತವಾಗಿ ಬಣ್ಣ ಬದಲಿಸತೊಡಗುತ್ತದೆ. ಸಿಹಿತನದ ತುಟ್ಟತುದಿ ತಲುಪಿದಾಕ್ಷಣ ಒಳತಿರುಳು ಕಳಿತು ಕೊಳೆಯತೊಡಗಿದರೆ ಹೊರಸಿಪ್ಪೆಯೂ ಬಣ್ಣಗೆಟ್ಟು ಅವಸಾನ ಸೂಚಕವಾಗುತ್ತದೆ. ಹಾಗೆಯೆ ದೇಹವೆಂಬ ಹಣ್ಣು ಕೂಡ ತಾರುಣ್ಯದೇರಿನಲ್ಲಿ ಫಲವಂತಿಕೆಯ ಕುರುಹಾಗಿ ಅಂಗಾಂಗ ಸೌಂದರ್ಯ ತಳೆಯುತ್ತದೆ. ಮನಮಾಗಿದ್ದರೂ ಭಾವಬಯಲಾಗಿದ್ದರೂ ದೇಹವಿನ್ನೂ ಕಳಿತು ವಿಕಾರಗೊಳ್ಳದಿದ್ದರೆ ಅದು ದೇಹಿಯ ತಪ್ಪೆ? ಇದು ಅಕ್ಕ ಒಗೆವ ಒಳಪ್ರಶ್ನೆ. ಈ ಪ್ರಶ್ನೋತ್ತರದ ಸಾಂದರ್ಭಿಕತೆಯೂ ತುಂಬ ಅರ್ಥಗರ್ಭಿತವಾದುದು. "ಭಾವಶುದ್ಧವಾದಲ್ಲಿ ಸೀರೆಯನಳಿದು ಕೂದಲ ಮರೆಸಲೇತಕ್ಕೆ?" ಎಂಬ ಪ್ರಭುದೇವನ ಮರ್ಮಭೇದಕ ಮೊನಚಿನ ಲಜ್ಜಾತೀತ ಪ್ರಶ್ನೆಗೆ ಅಕ್ಕನ ಮಾರ್ಮಿಕ ಉತ್ತರ ರೂಪಿ ಪ್ರಶ್ನೆಯಿದು. ಸುತ್ತಲಿನ ನಿಸರ್ಗ ವ್ಯಾಪಾರದ ತಿಳಿವು ಅಂತರಂಗದ ಅರಿವು ಎರಡನ್ನೂ ಹದವಾಗಿ ಒಗ್ಗೂಡಿಸಿ ಬಸಿದ ಬೆಡಗಿನ ಸ್ವಾದದ ಅನುಭಾವ ಸಾರಾಯವಿದು. ಶಬ್ದಾರ್ಥಗಳು ಮಿದುಳಿಗಿರಿದು ಎದೆಯಲ್ಲಿ ಹೊಸ ಇಂಗಿತ ಸುಳಿವಂತೆ ಮಾಡುವ ಈ ಮಟ್ಟದ ಭಾಷಿಕ ನೆಲೆಯಲ್ಲಿ ಪ್ರಭುದೇವನಿಗೆ ಮಾರುತ್ತರ ಕೊಡಬಲ್ಲ ದಿಟ್ಟೆಯರೆಂದರೆ ಬಸವಣ್ಣನ ಅಕ್ಕ ಮಹಾದೇವಿ

ಮತ್ತು ಅಜಗಣ್ಣನ ತಂಗಿ ಮುಕ್ತಾಯಕ್ಕ ಇಬ್ಬರೆ. ಲೋಕಮರ್ಯಾದೆ ನಾಣು ನಾಚಿಕೆಯನ್ನೆಲ್ಲ ಕೇರಿತೂರಿ, ಯಾವ ಮುಲಾಜೂ ಇಲ್ಲದೆ, ನೈಜ ನಗ್ನಶೈಲಿಯಲ್ಲಿ ಉರಿವ ಕೆಂಡದಂಥ ಸತ್ಯವ ಅಂಗೈಯಲ್ಲಿ ಹಿಡಿವ ಅಭಿವ್ಯಕ್ತಿಯ ಪರಿಯಿದು. ಆತ್ಯಂತಿಕ ಸತ್ಯಕ್ಕೆ ಲಜ್ಜೆಯೆಂಬುದೆ ಇಲ್ಲ. ಇದ್ದದ್ದು ಇದ್ದ ಹಾಗೆ ಹೇಳುವುದಷ್ಟೆ ಅದರ ಗುರಿ. ಎದ್ದು ಬಂದು ಎದೆಗೊದ್ದಷ್ಟು ಆಘಾತಕಾರಿ ಎನ್ನಿಸಿದರೆ ಅದು ನಮ್ಮ ಹಣೆಬರಹ. ಅಂಥ ಸತ್ಯಕ್ಕೆ ಸಾಮಾಜಿಕರ ಮಡಿಮೈಲಿಗೆ ಬಡಿವಾರ ಬಿನ್ನಾಣದ ಹಂಗಿಲ್ಲ. ಭಾಷಿಕ ನಯ ವಿನಯ ನಕರಾಗಳು ಗೊತ್ತೇಯಿಲ್ಲ. ಹೀಗಾಗಿ ಪ್ರಭುದೇವ ಕೂಡ ಇತರರ ಸತ್ವಪರೀಕ್ಷೆ ಮಾಡಿದಷ್ಟು ಸುಲಭವಾಗಿ ಅಕ್ಕನ ಸತ್ವಪರೀಕ್ಷೆ ಮಾಡಲಾರ. ಯಾಕೆಂದರೆ ಅವಳ ಉತ್ತರಗಳೆ ಅವನನ್ನು ನಿರುತ್ತರಗೊಳಿಸಬಲ್ಲವು. ವಾಚ್ಯಾರ್ಥ ಧ್ವನ್ಯಾರ್ಥ ಎರಡರಲ್ಲು ಅಲ್ಲಮನ ವಚನಗಳನ್ನೆ ನಿರ್ವಚನಗೊಳಿಸಬಲ್ಲ ಆಳವಾದ ಅಂತಃಶಕ್ತಿ, ಅರಿವಿನ ಅಂತಃಸತ್ವ, ಭಾಷಿಕ ಕಸುವು ಅಕ್ಕನ ವಚನಗಳಿಗಿದೆಯೆಂದು ಚೆನ್ನಬಸವಣ್ಣ ಜಾಹೀರುಗೊಳಿಸಿ -ದ್ದಾನಷ್ಟೆ? ಪ್ರಶ್ನೆ ಕೇಳುವಾಗಲೂ ಬಲು ಎಚ್ಚರಿಕೆಯಿಂದಿರಬೇಕು ಎಂಬ ಪಾಠವನ್ನು ಪ್ರಭು ಅಕ್ಕನಿಂದ ಕಲಿತಂತೆ ಕಾಣುವುದಕ್ಕೆ ಈ ವಚನವೆ ಸಾಕ್ಷಿ. ಹಣ್ಣಾಗಲಿ ಹೆಣ್ಣಾಗಲಿ ಹಳೆಯದಾಗಿ ಅತಿಕಳಿತರೆ ಒಳತಿರುಳು ಕೊಳೆತು ಹೊರಸಿಪ್ಪೆ ಬಣ್ಣಗೆಟ್ಟು ನಿರಿಗೆಗಟ್ಟಿ ಬತ್ತೀತು. ಅಲ್ಲಿವರೆಗೆ "ಹೊರಗಣ ಸಿಪ್ಪೆ ಒಪ್ಪಗೆಡದು". ಆಧುನಿಕ ಪರಿಭಾಷೆಯಲ್ಲಿ ಇದು ಮೂಲವಿಜ್ಞಾನದ ಮೊದಲಪುಟ; ಲೋಕಜ್ಞಾನದ ಸರಳಾತಿಸರಳ ಪ್ರಾಥಮಿಕ ಪಾಠ. ಪ್ರಭುದೇವನಂಥ ಪ್ರಭುದೇವನೆ ಅಕ್ಕನಿಂದ ಇಂಥ ಪಾಠ ಕಲಿತ ಸಂಗತಿ ಅನುಭಾವವಲಯದ ಬಹುದೊಡ್ಡ ಅಚ್ಚರಿ. ಆಧುನಿಕರ ಪಾಲಿಗೆ ಹುಬ್ಬೇರಿಸುವ ಐರನಿ. ದೊಡ್ಡವರೂ ಒಮ್ಮೊಮ್ಮೆ ಸಣ್ಣತಪ್ಪು ಮಾಡುತ್ತಾರೆಂಬುದಕ್ಕೆ ಇದೆ ಉದಾಹರಣೆ. ಇಷ್ಟಕ್ಕೇನಿಲ್ಲದೆ ಅಕ್ಕ "ಕಾಮನ ಮುದ್ರೆಯ ಕಂಡು ನಿಮಗೆ ನೋವಾದೀತೆಂದು ಆ ಭಾವದಿಂದ ಮುಚ್ಚಿದೆ! ಇದಕೆ ನೋವೇಕೆ?" ಎಂದು ಅರಿವಿನ ಚಾಟಿ ಬೀಸಿದಾಗಲಂತೂ ಅಲ್ಲಮ ಬಸವರ ಸಮೇತ ಇಡಿ ಶರಣ ಶರಣೆ ಗಡಣವೆ ಬೆಚ್ಚಿಬಿದ್ದು ಎದೆಮುಟ್ಟಿ ನೋಡಿಕೊಂಡಿರಬಹುದು. ನಿಸರ್ಗವೆ ಕಾಮನ ಮುದ್ರೆಗಳನ್ನು ಅವಳ ತಾರುಣ್ಯ ದೇಹದ ಮೇಲೆ ಒತ್ತಿದೆ ನಿಜ. ಅದಕ್ಕವಳೇನು ಕಾರಣವಲ್ಲವಲ್ಲ. ಆ ಮುದ್ರೆಗಳನ್ನುಕಂಡು ಕಾಮಕೆರಳಿಸಿಕೊಂಡು ಭುಗಿಲುಗೊಳ್ಳುವ ಗಂಡುಕುಲವನ್ನೆ ಹೀಯಾಳಿಸಿ ಹಿತವಾಗಿ ತಿದ್ದಿ ತೀಡುತ್ತಿದ್ದಾಳೆ ಅಕ್ಕ. ಗಂಡಸರೆಲ್ಲರ ಆತ್ಮಗೌರವಕ್ಕೆ ಸಹಿಸಲಾರದ ಪೆಟ್ಟು ಇದು. ಸಹಜವಾದ ಹೆಣ್ಣರಿವು ತಾರ್ಕಿಕವಾದ ಗಂಡು ಬುದ್ಧಿಯನ್ನು ಪುಟ್ಟಪೂರಾ ಪರಾಭವಗೊಳಿಸಿದ ಐತಿಹಾಸಿಕ ಮೈಲಿಗಲ್ಲಿನಂಥ ಮಾತಿನ ಮಾದರಿ ಇದು. ಇಷ್ಟೆಲ್ಲ ಹೇಳಿ "ಕಾಡದಿರಣ್ಣ ಚೆನ್ನಮಲ್ಲಿಕಾರ್ಜುನ ದೇವನ ಒಳಗಾದವಳ" ಎಂದು ಬೇಡಿಕೊಳ್ಳುವಲ್ಲಿನ ವಿನಮ್ರತೆ, ತಾಯ್ಮಮತೆ ಕೊನೆಯೆ ಇಲ್ಲದ್ದು. ನಾನೆ ದೇವರೆಂಬ 'ಅದ್ವೈತವ ನುಡಿದು ಅಹಂಕಾರಿ'ಯಾಗಲೊಲ್ಲದ ಅಕ್ಕ ಇಡಿಯಾಗಿ ಚೆನ್ನಮಲ್ಲಿಕಾರ್ಜುನನೊಳಗಾಗಿ ತಾನೆಂಬುದೆ ಇನ್ನಿಲ್ಲವಾಗಿ ಉಭಯವಳಿದು ಅದ್ವಯ ಭಾವ ಸಾರುವ ನಿರಹಂಕಾರಿಣಿ ಕಂಗೊಳಿಸುತ್ತಿದ್ದಾಳೆ ಈ ಕೊನೆಸಾಲಲ್ಲಿ. ಅಕ್ಕನ ಅನುಭಾವಿಕ ವಿಶ್ವವಿಜಯದ ಮಹಾಶಾಸನದಂತಿರುವ ಈ ವಚನ ಅವಳ ಮೇರುನುಡಿಗಳಲ್ಲೊಂದು. ಅಕ್ಕನೆ ವಚನಕಾರರೆಲ್ಲರ ಮುಕುಟಮಣಿ ಎಂದು ಚೆನ್ನಬಸವಣ್ಣ ಬಣ್ಣಿಸಿರುವುದು ಇಂಥ ವಚನಗಳ ಬೆಳಕಿನಲ್ಲೆ. ಶ್ರೀಗಿರಿಗೆ "ಶ್ರೀಶೈಲ ಶಿಖರಂದೃಷ್ಟ್ವಾ ಪುನರ್ಜನ್ಮ ನವಿದ್ಯತೆ" ಎಂಬಗ್ಗಳಿಕೆ ತಂದಿತ್ತ ಚೆನ್ನಮಲ್ಲಿಕಾರ್ಜುನನ ಮೇಲೆ ಅವಳಿಟ್ಟ ಅವಿನಾಭಾವ ಭಕ್ತಿಯ ಪ್ರಚಂಡಸಿದ್ಧಿ ಇದು. ಕನ್ನಡ ಭಾಷೆಯನ್ನ ವಿಶ್ವಮಾನ್ಯಗೊಳಿಸಿ ವಿಶ್ವಾಗ್ರಪಂಕ್ತಿಯಲ್ಲಿ ನಿಲ್ಲಿಸಿದ ನುಡಿಶಕ್ತಿ



ಇದು. ಇಂಥ ಅಪರೂಪದ ಪ್ರಸಂಗಾವಧಾನ ಮತ್ತು ದೃಷ್ಟಾಂತಗಳಿಂದಾಗಿಯೆ ಕನ್ನಡ ಭಾಷಿಕ ಸಂಸ್ಕೃತಿ ವರ್ಲ್ಡ್‌ಕ್ಲಾಸ್ ಮಟ್ಟಕ್ಕೇರಲು ಸಾಧ್ಯವಾಗಿರುವುದು. ಆಡಿದ ಮಾತು ಎಡವಿದರೆ ಅದು ಒಡೆದ ಮುತ್ತಿಗೆ ಸಮಾನ. ಮನೋನಿಗ್ರಹ ವಾಕ್ ನಿಗ್ರಹವಿರದೆ "ಒಂದನಾಡ ಹೋಗಿ ಒಂಬತ್ತನಾಡುವವರೆಲ್ಲ"ರನ್ನು ಜರೆದಿದ್ದಾನೆ ಚೆನ್ನಬಸವಣ್ಣ. ಅಂಥವರೆಲ್ಲ ಇತರರಿಗೆ ಶಾಪವಿಟ್ಟಿಟ್ಟು ತಾವೆ ಶಾಪಗ್ರಸ್ತರಾಗುವ ದೂರ್ವಾಸರೆ ಸರಿ. ತದ್ವಿರುದ್ಧವಾದದ್ದು ಅಕ್ಕನ ಪ್ರಾಸಂಗಿಕ ಅಂತಃಸ್ಫುರಣೆ ಮತ್ತು ಅಪೂರ್ವವಾಕ್ಸಿದ್ಧಿ. ಅದು ಅರಿವಿನ ಅತ್ಯೆಚ್ಚರದ ಶಿಖರವೇರಿದವರ ಲಕ್ಷಣ. ತನ್ನ ಭೌತಿಕಸತ್ವ ಮತ್ತು ಆತ್ಮಶಕ್ತಿಯ ಪ್ರಭೆಯನ್ನೆ ಕ್ಲುಪ್ತವಾಗ್ಝರಿಯಾಗಿ ಪರಿವರ್ತಿಸಬಲ್ಲ ರಸವಿದ್ಯೆ ಅಕ್ಕನದು. ಅವಳ ನುಡಿ ಲಾವಾರಸದಷ್ಟೆ ಪವಿತ್ರ. ಅದರ ಆತ್ಯಂತಿಕ ಶಾಖ ಮತ್ತು ಬೆಳಕು ಕೇಳುಗರ ಕಿವಿ ಮಿದುಳು ಹೃದಯ ಕರುಳು ನಿಚ್ಚೆರಗಾಗಿಸಿ, ಆತ್ಮಪ್ರಚ್ಛಾಳನಮಾಡಿ, ಲೋಕಗ್ರಹಿಕೆಯನ್ನೆ ಅನಾಮತ್ ಬದಲಿಸಿಬಿಡಬಲ್ಲವು. ಕಿರಿವಾತಿನಲ್ಲಿ ಹಿರಿಯರ್ಥವಡಗಿಸಿ ನುಡಿಗಳನ್ನೆ ತನ್ನಿಷ್ಟದೈವ ಚೆನ್ನಮಲ್ಲಿಕಾರ್ಜುನನಿಗೆ ಮುತ್ತಿನಹಾರ ಮಾಡಿ ತೊಡಿಸಿದ ಅಪ್ಪಟ ಪ್ರೇಮಾನುಭಾವಿ ಅಕ್ಕನ ಕುರಿತು ವರಕವಿ ಬೇಂದ್ರೆ ಹೀಗೆ ಆನಂದೋದ್ಗಾರ ತೆಗೆದಿದ್ದಾರೆ: "'ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಂಗೆ ತೋರುವ ಚೆಲುವು ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ' ಎನುವ ಮಹಾದೇವಿಯಕ್ಕನ ವಾಗ್ವಿಭೂತಿಯಲ್ಲಿ- ಎಷ್ಟು ಅರ್ಥ ಅಡಗಿಲ್ಲ?" (ಸಾಹಿತ್ಯದ ವಿರಾಟ್ ಸ್ವರೂಪ, ದ.ರಾ.ಬೇಂದ್ರೆ, ೧೯೭೪, ಪು.೩೧೫)

'ಅನಿಮಿಷ', ಕ್ರಾಸ್-೭, ದುರ್ಗಿಗುಡಿ ಹಂತ ೧, ಹೊನ್ನಾಳಿ - ೫೭೭ ೨೧೭
ದಾವಣಗೆರೆ ಜಿಲ್ಲೆ ೯೮೮೮೧ ೩೦೨೦೩

## ಶ್ರದ್ಧಾಂಜಲಿ

### ಶ್ರೀ ಮಲ್ಲೇಶ ಬೂದಿಹಾಳ



ಶ್ರೀ ಮಲ್ಲೇಶ ಬೂದಿಹಾಳ ಅವರು ಮೂಲತಃ ರೋಣ ತಾಲ್ಲೂಕು ಜಕ್ಕಲಿ ಗ್ರಾಮದ ನಿವಾಸಿಯಾದ ಕೈಗಾರಿಕೋದ್ಯಮಿ (೭೨) ಬೆಂಗಳೂರಿನಲ್ಲಿ ಶನಿವಾರ (೧೮.೦೭.೨೦೨೦) ನಿಧನ ಹೊಂದಿದರು. ಮಲ್ಲೇಶ ಬೂದಿಹಾಳ ಅವರು ಗದಗದಲ್ಲಿ ವ್ಯಾಸಂಗ ಮುಗಿಸಿ, ಬೆಂಗಳೂರಿನಲ್ಲಿ ಪೇಪರ್ ಪ್ಯಾಕಿಂಗ್ ಘಟಕ ಆರಂಭಿಸಿದ್ದರು. ವಿಆರ್‌ಎಲ್ ಲಾಜಿಸ್ಟಿಕ್ಸ್‌ನ ನಿರ್ದೇಶಕರಾಗಿಯೂ ಕೆಲ ಕಾಲ ಕಾರ್ಯನಿರ್ವಹಿಸಿದ್ದರು. ಮಲ್ಲೇಶ ಬೂದಿಹಾಳ ಅವರು ಅತ್ಯಂತ ಕಠಿಣ ಪರಿಶ್ರಮ, ಪ್ರಾಮಾಣಿಕತೆ, ನಿಷ್ಠೆಯಿಂದ ಬದುಕು ಕಟ್ಟಿಕೊಂಡಿದ್ದ ಅವರು ಬೆಂಗಳೂರಿನಲ್ಲಿಯೇ ಕೈಗಾರಿಕಾ ಘಟಕ ಆರಂಭಿಸಿ, ಅದನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಬರುತ್ತಿದ್ದರು.

ಶ್ರೀ ಮಲ್ಲೇಶ ಬೂದಿಹಾಳ ಅವರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನಲ್ಲಿ ಕೋಶಾಧ್ಯಕ್ಷರಾಗಿ ಸಲ್ಲಿಸಿದ ಸೇವೆಯನ್ನು ಸ್ಮರಿಸುತ್ತಾ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಅವರ ಆತ್ಮಕ್ಕೆ ಶಾಂತಿಯನ್ನು ಮತ್ತು ಅವರ ಕುಟುಂಬದವರಿಗೆ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿ ನೀಡಲಿ ಎಂದು ಭಗವಂತನಲ್ಲಿ ಕೋರುತ್ತದೆ.

# ವಚನಗಳಲ್ಲಿ ಮೌಢ್ಯ ವಿರೋಧಿ ನಿಲುವು

ಡಾ. ವಸುಂಧರಾ ಭೂಪತಿ

**ವಾರಗಳು**

ಅಕ್ಷರಸ್ಥರೂ ಸೇರಿ ಬಹಳಷ್ಟು ಜನರು ಇವತ್ತಿಗೂ ಕೆಲವು ದಿನಗಳನ್ನು ಶುಭದಿನಗಳೆಂದು, ಇನ್ನೂ ಕೆಲವು ದಿನಗಳನ್ನು ಅಶುಭದಿನಗಳೆಂದು ನಂಬಿದ್ದಾರೆ. ಉದಾ: ಸೋಮವಾರ ಶುಭದಿನ, ಮಂಗಳವಾರದ ಅಶುಭದಿನ, ಇಂದಿಗೂ ಕ್ಷೌರಿಕನ ಅಂಗಡಿಗೆ ಜನ ಮಂಗಳವಾರ ಹೋಗುವುದಿಲ್ಲ. ಏಕೆಂದರೆ ಮಂಗಳವಾರ ಕ್ಷೌರ ಮಾಡಿಕೊಂಡರೆ ಅಶುಭ ಸಂಭವಿಸುತ್ತದೆಂಬ ಮೂಢನಂಬಿಕೆ ಕೆಲ ವಿಜ್ಞಾನಿಗಳಲ್ಲಿಯೂ ಇರುವುದನ್ನು ಕಾಣುತ್ತಿದ್ದೇವೆ. ಕೆಲವು ಮುಖ್ಯ ಕೆಲಸಗಳನ್ನು ಆರಂಭಿಸಲು ಉದಯಕಾಲ ಉತ್ತಮ. ಮಧ್ಯಾಹ್ನದ ಸಮಯ ಒಳ್ಳೆಯದಲ್ಲ ಎಂಬ ಮೂಢನಂಬಿಕೆ ನಮ್ಮ ಸಮಾಜದಲ್ಲಿದೆ. ರಾಹುಕಾಲ, ಗುಳಿಕಕಾಲ ಎಂಬ ಅಂಧಶ್ರದ್ಧೆ ಈಗಲೂ ನಮ್ಮ ಸಮಾಜದಲ್ಲಿ ಬೇರೂರಿದೆ. ನಮ್ಮ ವಚನಕಾರರು ಇದನ್ನು ಸಾರಾಸಗಟಾಗಿ ಧಿಕ್ಕರಿಸಿದರು.

**ಉದಯ ಮಧ್ಯಾಹ್ನ ಸಂಧ್ಯಾಕಾಲವ ನೋಡಿ**
**ಮಾಡುವ ಕರ್ಮ ನೀ ಕೇಳು**
**ಉದಯದಿಂದೇನೋ ಶರಣಂಗೆ?**
**ಮಧ್ಯಾಹ್ನವೆಂದೇನೋ ಶರಣಂಗೆ?**
**ಅಸ್ತಮಾನವೆಂದರೇನೋ ಶರಣಂಗೆ?**
**ಮಹಾಮೇರುವಿನ ಮರೆಯಲಿರ್ದು**
**ತನ್ನ ನೆರಳನರಸುವ ಭಾವಭ್ರಮಿತರ ಮೆಚ್ಚ**
**ನಮ್ಮ ಕೂಡಲಚೆನ್ನಸಂಗಮದೇವಾ?**

**ಲಗ್ನ – ಶುಭ ಮತ್ತು ಅಶುಭ**

ಇಂದಿಗೂ ನಮ್ಮ ಸಮಾಜದಲ್ಲಿ ಲಗ್ನಪತ್ರಿಕೆಯಲ್ಲಿ 'ಶುಭಲಗ್ನ'ವೆಂಬ ಇದ್ದೇ ಇರುತ್ತದೆ. ಮದುವೆ ಸಮಯವನ್ನು ನಿರ್ಧರಿಸುವಲ್ಲಿ ಬಹುಶಃ ಎಲ್ಲರೂ ಜ್ಯೋತಿಷಿಗಳನ್ನ ಕೇಳಿ 'ಶುಭಲಗ್ನ' ನಿರ್ಧರಿಸುತ್ತಾರೆ. ಇಂತಹ ಶುಭಲಗ್ನದಲ್ಲಿ ಆದ ಮದುವೆಗಳು ಮುರಿದುಬೀಳುತ್ತವೆ. ಆದ್ದರಿಂದ ಶುಭಲಗ್ನಗಳೆಂಬುದಿಲ್ಲ. ಶುಭ-ಅಶುಭಗಳಿರುವುದು ನಮ್ಮ ಪ್ರೀತಿ ವಿಶ್ವಾಸಗಳಲ್ಲಿ ಎಂಬುದನ್ನು ಬಸವಣ್ಣನವರು ಹೀಗೆ ಹೇಳುತ್ತಾರೆ.

**'ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನರಯ್ಯ**
**ರಾಶಿಕೂಟ ಗಣ ಸಂಬಂಧ ಉಂಟೆಂದು ಹೇಳಿರಯ್ಯ**
**ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯ**
**ನಾಳಿನ ದಿನಕ್ಕಿಂದಿನ ಲೇಸೆಂದು ಹೇಳಿರಯ್ಯ**
**ಕೂಡಲಸಂಗಮನ ಪೂಜಿಸಿದ ಫಲ ನಿಮ್ಮದಯ್ಯ'**

ವೈದಿಕ ಧರ್ಮದಲ್ಲಿ ಇಂದಿಗೂ ಪಂಚಸೂತಕಗಳು ಆಚರಣೆಯಲ್ಲಿವೆ. ಈ ಸೂತಕಗಳ



ಆಚರಣೆಯ ನೆಪದಲ್ಲಿ ಕೆಳಜಾತಿಯಲ್ಲಿ ಹುಟ್ಟಿದವರ, ದುಃಖಿತರ ಸ್ತ್ರೀಯರ ಶೋಷಣೆ ಯಾಗುವುದನ್ನು ಗುರ್ತಿಸಿದ ವಚನಕಾರರೆಲ್ಲರೂ ಈ ಸೂತಕಗಳನ್ನು ನಿರಾಕರಿಸಿದರು.

**ನೇಮಗಳು**

ಹಿಂದೂಧರ್ಮದಲ್ಲಿ ನೇಮಗಳ ಹೆಸರಿನಲ್ಲಿ ವಿವಿಧ ಸೌಲಭ್ಯಗಳನ್ನು ಮೇಲ್ವರ್ಗದವರು ಪಡೆಯುತ್ತಿದ್ದರು. ಅದಕ್ಕಾಗಿ ಅಲ್ಲಮಪ್ರಭು ಅಂತಹವರನ್ನು ಕಟುವಾದ ವ್ಯಂಗಕ್ಕೆ ಗುರಿ ಮಾಡಿದ್ದಾರೆ.

**'ಹಾಲ ನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ**
**ಕಡಲೆಯ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ**
**ಅಗ್ಘವಣಿಯ ನೇಮವ ಹಿಡಿದಾತ ಕಪ್ಪೆಯಾಗಿ ಹುಟ್ಟುವ**
**ಇವು ಷಟ್‌ಸ್ಥಳಕ್ಕೆ ಹೊರಗು**
**ಭಕ್ತಿನಿಷ್ಠೆಯಿಲ್ಲದವರ ಕಂಡಡೆ ಮೆಚ್ಚರು ಗುಹೇಶ್ವರ'**

ವೈದಿಕರು ಬೋಧಿಸಿ ಆಚರಿಸುತ್ತಿದ್ದ ಶೋಷಣೆಯ ಸಾಧನವಾಗಿದ್ದ ಈ ನೇಮಗಳನ್ನು ಧಿಕ್ಕರಿಸುತ್ತಾರೆ.

ಬಸವಣ್ಣನವರು ನೀರಿನಲ್ಲಿ ಮುಳುಗಿ ಮೋಕ್ಷ ಕಾಣಬೇಕೆಂದು ಬಯಸುವವರನ್ನು ತೀಕ್ಷ್ಣವಾದ ಟೀಕೆಗೆ ಗುರಿ ಮಾಡಿದ್ದಾರೆ.

**ನೀರು ಕಂಡಲ್ಲಿ ಮುಳುಗುವರಯ್ಯ**
**ಮರವ ಕಂಡಲ್ಲಿ ಸುತ್ತುವರಯ್ಯ!**
**ಬತ್ತುವ ಜಲವು ನೊಣಗುವ ಮರವ**
**ಮೆಚ್ಚಿದವರು ನಿಮ್ಮ ನೆತ್ತಬಲ್ಲರು, ಕೂಡಲ ಸಂಗಮದೇವಾ**

ಯಜ್ಞ – ಯಾಗದ ಕೇಂದ್ರ ಸ್ಥಾನ ಯಜ್ಞಕುಂಡ. ಈ ಅಗ್ನಿಕುಂಡಕ್ಕೆ ತುಪ್ಪ, ಪೀತಾಂಬರ ಮುಂತಾದ ಅಮೂಲ್ಯ ವಸ್ತುಗಳನ್ನು ಹಾಕಿ ಸುಡುವುದರಿಂದ ದೇವತೆಗಳು ಅದರಲ್ಲು ಮುಖ್ಯವಾಗಿ ಅಗ್ನಿದೇವ ತೃಪ್ತನಾಗಿ ಬೇಡಿದ ವರವನ್ನು ಕೊಡುತ್ತಾನೆ ಎಂಬ ಮೂಢನಂಬಿಕೆ ವೇದಕಾಲದಿಂದ ಇಂದಿನವರೆಗೂ ನಡೆದುಕೊಂಡು ಬಂದಿದೆ. ರಾಜಕಾರಣಿಗಳು ಭ್ರಷ್ಟಾಚಾರದಿಂದ ತಾವು ಗಳಿಸಿದ ಹಣ ಮತ್ತು ಅಧಿಕಾರಗಳನ್ನು ಉಳಿಸಿಕೊಳ್ಳುವುದರ ಸಲುವಾಗಿ ಹೋಮ, ಹವನಗಳನ್ನು ಆಚರಿಸಿ ನೈಸರ್ಗಿಕ ಸಂಪನ್ಮೂಲವನ್ನು ಹಾಳುಮಾಡಿ ಪರಿಸರಮಾಲಿನ್ಯ ಉಂಟು ಮಾಡುತ್ತಾರೆ. ಈ ವೈಜ್ಞಾನಿಕ ಯುಗದಲ್ಲಿ ಸಾವಿರಾರು ಲೀಟರ್ ಹಾಲು, ಕೆಜಿಗಟ್ಟಲೇ ತುಪ್ಪ ಸುರಿದು ವ್ಯರ್ಥಗೊಳಿಸುವುದು ಅದೆಷ್ಟು ಸರಿ! ನಮ್ಮ ದೇಶದಲ್ಲಿ ಅಪೌಷ್ಟಿಕತೆ ತಾಂಡವಾಡುತ್ತಿರುವಾಗ ಹಾಲು, ತುಪ್ಪ ಪೋಲು ಮಾಡುವುದು ಎಂತಹ ವೈರುಧ್ಯದ ಸಂಗತಿ. ಯಜ್ಞಯಾಗಗಳ ದೈವವಾದ ಅಗ್ನಿಯನ್ನು ಬಸವಣ್ಣನವರು ವ್ಯಂಗಕ್ಕೆ ಹೀಗೆ ಗುರಿಮಾಡುತ್ತಾರೆ.

**ಕಿಚ್ಚು ದೈವವೆಂದು ಹವಿಯನಿಕ್ಕುವ**
**ಹಾರವರ ಮನೆಯಲ್ಲು**
**ಕಿಚ್ಚೆದ್ದು ಸುಡುವಾಗ**
**ಬಚ್ಚಲು ನೀರ, ಬೀದಿಯ ಧೂಳು ಹೊಯ್ದು**

**ಬೊಬ್ಬಿಟ್ಟೆಲ್ಲರ ಕರೆವರಯ್ಯ**
**ಕೂಡಲಸಂಗಮದೇವಾ ಯಜ್ಞದ ಅಧಿದೇವತೆಯನ್ನು**
**ಬಚ್ಚಲ ನೀರು ಮತ್ತು ಧೂಳಿನಿಂದ**
**ನಂದಿಸಿದರೆ ಯಾಗಕ್ಕೆ ಎಲ್ಲಿಯ ಸ್ಥಾನ!**

**ಶಕುನ – ಅಪಶಕುನ**

ನಮ್ಮ ಆಶಯಗಳು ಈಡೇರದಿದ್ದಾಗ ಕಾರಣಗಳನ್ನು ಹುಡುಕುತ್ತಾ ಶಕುನಗಳಿಗೆ ಶರಣಾಗುತ್ತೇವೆ. ಈ ಶಕುನ–ಅಪಶಕುನಗಳನ್ನು ನಾವು ಕಾಗೆ, ಗೂಬೆ, ಹಲ್ಲಿ, ಹಾವು ಮುಂತಾದ ಪ್ರಾಣಿ, ಪಕ್ಷಿಗಳನ್ನು ಗುರಿಮಾಡಿ ಅವುಗಳ ಸಾವಿಗೆ ಕಾರಣರಾಗುತ್ತೇವೆ. ಶಕುನ ಮತ್ತು ಅಪಶಕುನಗಳ ನಮ್ಮ ಮಾನಸಿಕ ದುರ್ಬಲತೆಯ ಪರಿಣಾಮಗಳು ಅದಕ್ಕೆ ಉತ್ತರವಾಗಿ ಬಸವಣ್ಣನವರ ಒಂದು ವಚನ ಹೀಗೆ ಹೇಳುತ್ತದೆ.

**'ಹಾವಾಡಿಗನು ಮೂಕೊರತೆಯ ತನ್ನ ಕೈಯಲ್ಲಿ ಹಾವು**
**ಮಗನ ಮದುವೆಗೆ ಶಕುನವ ನೋಡ ಹೋದಾಗ,**
**ಇದಿರಲೊಬ್ಬ ಮೂಕೊರತೆಯ ಹಾವಾಡಿಗ ಕಂಡು ಶಕುನ**
**ಹೊಲ್ಲೆಂಬ ಚದುರ ನೋಡಾ!**
**ತನ್ನ ಸತಿಯ ಮೂಕೊರತೆಯು, ತನ್ನ ಕೈಯಲ್ಲಿ ಹಾವು ತನ್ನ**
**ಖಿನ್ನತೆಯನರಿಯದೆ ಅನ್ಯರನೆಂಬ ಕುನ್ನಿಯನೇನೆಂಬೆ ಕೂಡಲಸಂಗಮದೇವಾ'**

***ಹರಕೆಗಳು***

ತಾವು ನಂಬಿದ ದೇವರಿಗೆ ಹರಕೆ ಹೊರುವುದು ನಮ್ಮ ಸಮಾಜದಲ್ಲಿ ನಡೆದುಕೊಂಡು ಬಂದಿದೆ. ದೇವರಿಗೆ ಲಂಚಕೊಟ್ಟು ಕೆಲಸ ಮಾಡುವುದು ವ್ಯವಹಾರಿಕ ಪದ್ಧತಿಯಂತೆ ಕಂಡುಬರುತ್ತದೆ. ಇದೆಲ್ಲವೂ ದುರ್ಬಲ ಮನಸ್ಸಿನ ಪ್ರತಿಕ್ರಿಯೆ. ಒಳಗಿನ ಭಯ ನಿವಾರಣೆಗಾಗಿ ಹೊರಗೆ ಮಾಡುವ ಡಂಭಾಚಾರದ ಭಕ್ತಿ ಇದಾಗಿದೆ. ಇಂಥ ಹರಕೆಗಳು ಬಗ್ಗೆ ಬಸವಣ್ಣನವರ ವಚನ ಹೀಗಿದೆ.

**'ಹರಹಿ ಮಾಡುವುದು ಹರಕೆಯ ಕೇಡು**
**ನೆರಹಿ ಮಾಡುವುದು ಡಂಬಿನ ಭಕ್ತಿ**
**ಹರಬೇಡ ನೆರಹಬೇಡ**
**ಬಂದ ಬರವನರಿತು ಮಾಡಬಲ್ಲಡೆ**
**ಕೂಡಿಕೊಂಡಿದ್ದ ನಮ್ಮ ಕೂಡಲ ಸಂಗಮದೇವಾ'**

***ಮಾರಿ***

ಮೇಲ್ವರ್ಗದ ಜನರು ಯಜ್ಞಯಾಗದಿ ಮೂಢನಂಬಿಕೆಯ ಆಚರಣೆಗಳ ಮೂಲಕ ನೈಸರ್ಗಿಕ ಸಂಪನ್ಮೂಲಗಳನ್ನು ನಾಶಗೊಳಿಸಿದರೆ ಕೆಳವರ್ಗದ/ದಲಿತ ಜನ ಮಾರಿ, ಮಸಣಿ, ಮಡಕೆ, ಮರ ಮುಂತಾದ ಕ್ಷುದ್ರದೈವಗಳನ್ನು ನಂಬಿ ಅವುಗಳ ಸಂತೃಪ್ತಿಗಳಾಗಿ ಸಾಮೂಹಿಕವಾಗಿ ಕುರಿ, ಕೋಣ, ಕೋಳಿಗಳನ್ನು ಬಲಿ ಕೊಡುವುದರ ಮೂಲಕ ವಂಸರ ಮಾಲಿನ್ಯ ಮತ್ತು ಸಾಂಕ್ರಾಮಿಕ ರೋಗಗಳಿಗೆ ಕಾರಣರಾಗುತ್ತಾರೆ. ಈ ಸಾಂಕ್ರಾಮಿಕ ರೋಗಗಳಿಗೆ ಮುನಿದವಳು ಮಾರಮ್ಮ, ದುರ್ಗಮ್ಮ ಎಂದು ನಂಬಿ ಪುನಃ ಪ್ರಾಣಿಗಳ ಸಾಮೂಹಿಕ ಹತ್ಯೆಗೆ ಕಾರಣರಾಗುತ್ತಾರೆ.



ಹಿಂದಿನ ಕಾಲದಿಂದ ಆಚಾರಿಸಿಕೊಂಡ ಬಂದ ಈ ಪದ್ಧತಿಗಳು ವಿಜ್ಞಾನ–ತಂತ್ರಜ್ಞಾನಗಳು ಮುಂದುವರಿದ ಈ ಕಾಲದಲ್ಲಿಯೂ ಅಜ್ಞಾನಿಗಳಾದ ಶ್ರೀಮಂತರ ಮೂಲಕ ಹೆಚ್ಚಾಗುತ್ತಿರುವುದು ಶೋಚನೀಯ ಸಂಗತಿ. ಇಂತಹ ಜನರಿಗಾಗಿಯೇ ಬಸವಣ್ಣನವರು ಹೀಗೆ ಹೇಳುತ್ತಾರೆ.

**'ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು**
**ಹಣಿಗೆದೈವ, ಬಿಲ್ಲನಾರಿ ದೈವ ಕಾಣಿರಯ್ಯ**
**ಕೊಳಗದೈವ, ಗಿಣ್ಣಿಲು ದೈವ ಕಾಣಿರಯ್ಯ**
**ದೈವ ದೈವೆಂದು ಕಾಲಿಡಲಿಂಬಿಲ್ಲ**
**ದೈವನೊಬ್ಬನೇ ಕೂಡಲಸಂಗಮ ದೇವಾ'**

ಅಲ್ಲವೇ ಮಾರಿಮಸಣಿ ಎಂಬ ದೈವಗಳಿಗೆ ಹೊಸ ಅರ್ಥವನ್ನು ತಿಳಿಸಿ ದಲಿತ ವರ್ಗದ ಜನರಿಗೆ ಮಾರ್ಗದರ್ಶನ ನೀಡಿದರು.

**'ಮಾರಿ ಮಸಣಿ ಎಂಬವು ಬೇರಿಲ್ಲ**
**ಮಾರಿಯೆಂಬುದೇನು? ಕಂಗಳು ತಪ್ಪಿ ನೋಡಿದರೆ ಮಾರಿ**
**ನಾಲಿಗೆ ತಪ್ಪಿ ನುಡಿದರೆ ಮಾರಿ,**
**ನಮ್ಮ ಕೂಡಲಸಂಗಮ ನೆನಗೆ ಮರೆದರೆ ಮಾರಿ'**

ವಚನಕಾರರು ಮೂಢನಂಬಿಕೆಗಳನ್ನು ಸಮಾಜದಿಂದ ಹೊರಹಾಕಲು ತಮ್ಮ ವೈಚಾರಿಕ ಲೇಖನಿಯ ಮೂಲಕ ಸಾರಿದರು. ಇದರಿಂದ ಅಂದಿನ ಕಾಲದಲ್ಲಿ ಅವರು ಯಶಸ್ಸು ಸಾಧಿಸಿದ. ಆದರೆ ಮತ್ತೆ ಅವರೇ ಕಟ್ಟಿದ ಸಮಾಜದಲ್ಲಿ ಮೌಢ್ಯಗಳು ಪುನರ್ನವೀಕರಣಗೊಂಡು ಹರಿದಾಡುತ್ತಿರುವುದು ವಿಷಾದದ ಸಂಗತಿ. ಮೌಢ್ಯಗಳಿಂದ ದೂರವಾದ ಮನುಷ್ಯನಲ್ಲಿ ಜೀವನವನ್ನು ಎದುರಿಸುವ ಆತ್ಮಸ್ಥೈರ್ಯ ಬೆಳೆಯುತ್ತದೆಂಬುದಕ್ಕೆ ಸಾಕ್ಷಿ ಬಸವಣ್ಣನವರ ಈ ವಚನ

**'ನಾಳೆ ಬಪ್ಪುದು ನಮಗಿಂದೇ ಬರಲಿ**
**ಇಂದು ಬಪ್ಪುದು ನಮಗೀಗಲೇ ಬರಲಿ**
**ಇದಕಾರಂಜುವರು? ಇದಕಾರಳಕುವರು?**
**'ಜಾತಸ್ಯ ಮರಣಂ ಧ್ರುವಂ' ಎಂದುದಾಗಿ**
**ನಮ್ಮ ಕೂಡಲಸಂಗಮ ದೇವರು ಬರೆದ ಬರಹವ**
**ತಪ್ಪಿಸುವಡೆ ಹರಿಬ್ರಹ್ಮದಾಗಳಿಗಳಿವಲ್ಲ!'**

ಬಸವಣ್ಣ, ಅಲ್ಲಮ ಮುಂತಾದ ವಚನಕಾರರು ಒಂಭೈನೂರು ವರುಷಗಳ ಹಿಂದೆ ತೋರಿದ ವೈಜ್ಞಾನಿಕ ವಿಚಾರಧಾರೆಯು ಇಂದಿಗೂ ಸಾಧ್ಯವಾಗದಿರುವುದು ನಮ್ಮ ಸಾಮಾಜಿಕ ದುರಂತವೆಂದೇ ಹೇಳಬಹುದು.

●

*೨೨೨-೨ ಇ ಕ್ರಾಸ್, ೩ನೆ ಬ್ಲಾಕ್, ೩ನೇ ಹಂತ, ಬಸವೇಶ್ವರ ನಗರ, ಬೆಂಗಳೂರು ೭೯*
*ಮೊ: ೯೪೮೦೩ ೩೪೭೫೦*

## ಅಪರಿಮಿತ
## ಧರ್ಮವೆಂಬ ಮರ

**ಡಾ. ಓ.ಎಲ್. ನಾಗಭೂಷಣಸ್ವಾಮಿ**

ಬಸವಣ್ಣನವರ ವಚನ ಚಿರಪರಿಚಿತವೆಂಬ ಕಾರಣಕ್ಕೆ ಅದರಲ್ಲಿರುವ ಅದ್ಭುತವೊಂದು ನಮ್ಮ ಕಣ್ಣಿಗೆ ಕಾಣದಂತೆ ಅಡಗಿ ಕೂತಿದೆ. ಈ ವಚನದಲ್ಲಿ ರೂಪಕವಿದೆ ಎಂಬುದೇ ನಮ್ಮ ಅರಿವಿಗೆ ಬರದಷ್ಟು, ಹೋಗಲಿ ಹೊಳೆಯದಷ್ಟು, ಈ ವಚನವನ್ನು ಹೇಳಿ ಹೇಳಿ ಸವೆಸಿಬಿಟ್ಟಿದ್ದೇವೆ. ಆ ವಚನವನ್ನು ದಯವಿಟ್ಟು ಇನ್ನೊಂದು ಬಾರಿ ನೋಡಿ.

**ದಯವಿಲ್ಲದ ಧರ್ಮವದೇವುದಯ್ಯಾ, ದಯವೇ ಬೇಕು ಸರ್ವಪ್ರಾಣಿಗಳೆಲ್ಲರಲ್ಲಿ**
**ದಯವೇ ಧರ್ಮದ ಮೂಲವಯ್ಯಾ, ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.**

ಈ ವಚನದ ಮೂರನೆಯ ಸಾಲಿಗೆ ಸ್ವಲ್ಪ ಗಮನಕೊಟ್ಟು ನೋಡೋಣ. ಮೂಲ ಎಂಬ ಮಾತಿಗೆ ಬೇರು ಎಂಬ ಅರ್ಥವೂ ಇದೆಯಷ್ಟೇ. ಹಾಗಾದರೆ ಧರ್ಮವೆಂಬುದು ಒಂದು ವೃಕ್ಷ. ದಯೆ ಅದರ ಬೇರು ಎಂದು ಬಸವಣ್ಣ ಹೇಳುತ್ತಿರುವುದು ಮನಸ್ಸಿಗೆ ತಂದುಕೊಂಡರೆ ಆಗುವ ಅನುಭವವೇ ಬೇರೆ. ಮರವೊಂದು ಬೆಳೆದು ಪಶು ಪಕ್ಷಿ ಪ್ರಾಣಿ ಕೀಟ ಮನುಷ್ಯರೆಲ್ಲರಿಗೂ ಒದಗಿಬರುವ ಹಾಗೆ ಧರ್ಮವೂ ಕೂಡ. ಅದು ಎಲ್ಲ ಪ್ರಾಣಿಗಳಿಗೂ ಬೇಕಾದದ್ದು. ಧರ್ಮದ ಮರವನ್ನು ಮನುಷ್ಯನೇ ಹುಷಾರಾಗಿ ಬೆಳೆಸಬೇಕು. ಒಬ್ಬೊಬ್ಬ ಮನುಷ್ಯನೂ ಒಂದೊಂದು ಮರ, ದಯೆಯ ಬೇರು ಇರುವ ಮರವಾಗಬೇಕು.

ಧರ್ಮವೆನ್ನುವುದು ನಾವು ಇಂದು ಅಂದುಕೊಂಡಿರುವ ರಿಲಿಜನ್ ಥರದ್ದಲ್ಲ. ಆ ಅರ್ಥದಲ್ಲಿ ವಚನಕಾರರು ಆ ಪದವನ್ನು ಬಳಸದಿಂತೆಯೂ ಕಾಣದು. ಬದುಕಿಗೆ, ವ್ಯಕ್ತಿಯ ಮತ್ತು ಸಮಾಜದ ಬದುಕಿಗೆ ಅಗತ್ಯವಾದ ಕಟ್ಟಳೆ. ಕಟ್ಟು ಪಾಡು ಕೂಡ ಧರ್ಮವೇ. ಆ ಕಟ್ಟಳೆ, ಕಟ್ಟುಪಾಡು ಇಂದಿನ ಅರ್ಥದ ಕಾನೂನು ಎಲ್ಲಕ್ಕೂ ದಯವೇ ಬೇರು ಆಗಿರಬೇಕು ಅನ್ನುವ ಆಶಯಕ್ಕೂ ಈ ವಚನವನ್ನು ವಿಸ್ತರಿಸಿಕೊಳ್ಳಬಹುದು.

ಮೂಲ ಎನ್ನುವುದು ಬೇರು ಮಾತ್ರವೇ ಯಾಕೆ, ಬೇರಿಗೂ ಮೂಲವಾದ ಬಿತ್ತವೂ ಆಗಬಹುದಲ್ಲವೇ? ಹಾಗಾದಾಗ ಧರ್ಮವೆಂಬ ಮರ ದಯೆ ಎಂಬ ಬಿತ್ತದ ಫಸಲು. ಬೀಜವನ್ನು ನೆಟ್ಟು, ಅದು ಸಸಿಯಾಗಿ, ದನ ಕರುಗಳಿಗೆ ಆಹಾರವಾಗದೆ, ಗಾಳಿಗೆ ಬೀಳದೆ ಇರುವ ಹಾಗೆ ರಕ್ಷಿಸಿ ಬೆಳೆಸುವ ಜವಾಬ್ದಾರಿಯೂ ಮನುಷ್ಯನದ್ದೇ. ಅದು ಮನುಷ್ಯರೇ ಮಾಡಿಕೊಂಡ ಕಟ್ಟಳೆ. ಕಟ್ಟುಪಾಡುಗಳಿರಲಿ, ಅಥವಾ ಧರ್ಮವೇ ಇರಲಿ ಅದನ್ನು ಬೆಳೆಸುವುದು ಸುಲಭವಲ್ಲ. ಕೆಡುಕು ಬೆಳೆಯುವಷ್ಟು ಸುಲಭವಾಗಿ ಕಳೆ ಕಸ ವೃದ್ಧಿಸುವಷ್ಟು ಸಲೀಸಾಗಿ ಮರ ಬೆಳೆಯುವುದಿಲ್ಲ. ಧರ್ಮದ ಮರದ ಬೆಳಸು ಮನುಷ್ಯರ, ನಮ್ಮ ನಿಮ್ಮ ಎಲ್ಲರ ಜವಾಬ್ದಾರಿ. ಅಂದರೆ ದಯೆ ಎನ್ನುವುದು ಬೇರು, ಕಾಂಡ, ಟೊಂಗೆ, ಟಿಸಿಲು, ಎಲೆ, ಹೀಚು, ಕಾಯಿ, ಹಣ್ಣು ಇಡೀ ಮರದಲ್ಲಿ ವ್ಯಾಪಿಸಿ ನಿಲ್ಲುವ ಹಾಗೆ ಬದುಕಬೇಕು. ಕ್ರೌರ್ಯ ಬೆಳೆಯುವಷ್ಟೇ ಸುಲಭವಾಗಿ ದಯೆಯ ಬೀಜದಿಂದ ಅಥವ ಬೇರಿನಿಂದ ಧರ್ಮದ ಮರವೂ ಬೆಳೆದು, ಒಬ್ಬೊಬ್ಬರ ಎದೆಯಲ್ಲೂ ಆವರಿಸಿ ನಿಲ್ಲುವಂತಿದ್ದರೆ...! ಬರೀ ಕನಸೋ ಏನೋ.

●

*ನಂ.೪೪೫, ಆನಂದ ನಿಲಯ, ೮ನೆಯ ಮೇನ್, ಸರಸ್ವತಿಪುರಂ, ಮೈಸೂರು – ೫೭೦ ೦೦೯*
*ಮೊ: ೯೪೮೦೩ ೭೯೮೩೭*



## ವಚನ ರಸಪ್ರಶ್ನೆ ಸ್ಪರ್ಧೆ

### ವಚನ ರಸಪ್ರಶ್ನೆ–೨೦ರ ಸರಿಯುತ್ತರಗಳು

೧. (ಆ) ಡಾ. ಸತ್ಯನಾರಾಯಣಭಟ್ ಪಿ. ೨. (ಆ) ಅಂಬಿಗರ ಚೌಡಯ್ಯ ೩.(ಈ) ಸಂಗಮೇಶ್ವರದ ಅಪ್ಪಣ್ಣ ೪.(ಅ) ಎಂಜಲು ೫.(ಇ) ಡಾ.ವಿಜಯಶ್ರೀ ಸಬರದ

'ಮಹಾಮನೆ'ಯ ಹಲವಾರು ಓದುಗರು "ವಚನ ರಸಪ್ರಶ್ನೆ–೨೦"ರ ಉತ್ತರಗಳನ್ನು ಕಳಿಸಿದ್ದಾರೆ. ಆದರೆ ಒಬ್ಬರು ಸರಿ ಉತ್ತರವನ್ನು ಕಳಿಸಿರುವ ಕಾರಣದಿಂದ ಅವರಿಗೆ ಬಹುಮಾನವನ್ನು ಕಳಿಸಲಾಗಿದೆ.

**೧. ಶ್ರೀ ಗುರುಪ್ರಸಾದ್ ಕುಚ್ಚಂಗಿ, ಬೆಂಗಳೂರು**

### ವಚನ ರಸಪ್ರಶ್ನೆ ~೨೧ರ ಪ್ರಶ್ನೆಗಳು

**೧. 'ಹೃದಯ ಸಂವಾದ' – ಈ ಕೃತಿಯ ಲೇಖಕರು ಯಾರು?**
(ಅ) ಜಿ.ಎಸ್. ಶಿವರುದ್ರಪ್ಪ (ಆ) ಎಂ.ಆರ್. ಶ್ರೀನಿವಾಸಮೂರ್ತಿ
(ಇ) ಸುಜನಾ (ಈ) ಫ.ಗು. ಹಳಕಟ್ಟಿ

**೨. ಶಿ.ಶಿ. ಬಸವನಾಳ ಮತ್ತು ಕೆ.ಆರ್. ಶ್ರೀನಿವಾಸ ಅಯ್ಯಂಗಾರ್ ಅವರು ಅನುವಾದಿಸಿರುವ ವಚನಗಳ ಕೃತಿಯ ಹೆಸರು?**
(ಅ) Speeking of Shiva (ಆ) I keep the visil of Rudra
(ಇ) Musings of Basava (ಈ) Thousan Vachanas

**೩. 'ವಚನ ಶಾಸ್ತ್ರ ರಹಸ್ಯ' – ಕೃತಿಯನ್ನು ರಚಿಸಿದವರು:**
(ಅ) ಆರ್.ಆರ್. ದಿವಾಕರ (ಆ) ರಂ. ಶ್ರೀ ಮುಗಳಿ
(ಇ) ಎಸ್.ವಿ. ಪರಮೇಶ್ವರಭಟ್ಟ (ಈ) ಓ.ಎಲ್. ನಾಗಭೂಷಣಸ್ವಾಮಿ

**೪. 'ಅಖಂಡೇಶ್ವರ' ಎನ್ನುವುದು ಯಾರ ಅಂಕಿತ ನಾಮ?**
(ಅ) ಷಣ್ಮುಖಸ್ವಾಮಿ (ಆ) ನೀಲಮ್ಮ
(ಇ) ಅಂಬಿಗರ ಚೌಡಯ್ಯ (ಈ) ಉರಿಲಿಂಗ ಪೆದ್ದಿ

**೫. 'ರಾವುತಿಕೆ' ಎಂದರೆ?**
(ಅ) ಒಂದು ಕೃಷಿ (ಆ) ಕುದುರೆ ಸವಾರಿ
(ಇ) ಕೋಪ (ಈ) ವ್ಯಾಪಾರ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**
ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು–೫೬೦೦೭೦.

# ಅಗಣಿತ

**ಡಾ. ಅಮರೇಶ ನುಗಡೋಣಿ**

**ನೆಲದ ಮರೆಯ ನಿಧಾನದಂತೆ**
**ಮುಗಿಲ ಮರೆಯಲಡಗಿದ ಮಿಂಚಿನಂತೆ**
**ಬಯಲ ಮರೆಯಲಡಗಿದ ಮರೀಚಿಕೆಯಂತೆ**
**ಕಂಗಳ ಮರೆಯಲಡಗಿದ ಬೆಳಗಿನಂತೆ**
**ಗುಹೇಶ್ವರ ನಿಮ್ಮ ನಿಲವು**

**– ಅಲ್ಲಮಪ್ರಭು**

ವಚನಕಾರರು ದೇವರನ್ನು ಮೂರ್ತ ರೂಪದಲ್ಲಿ ಕಾಣುವ ಹಂಬಲ ಉಳ್ಳವರಾಗಿರಲಿಲ್ಲ. ಅವರು ದೇವರನ್ನು ಕಂಡುಕೊಂಡ ಪರಿಯೇ ಭಕ್ತರಿಗೆ ಮಾದರಿಯಾದದ್ದು. ದೇವರು ಇದ್ದಾನೋ? ಇಲ್ಲವೋ? ಎಂಬ ಪ್ರಶ್ನೆ ವಚನಕಾರರನ್ನು ಕಾಡಿಲ್ಲ. ದೇವರು ಇದ್ದಾನೆ. ಆದರೆ ಆತನ ಇರುವು ಗುಡಿಯಲ್ಲಿ ಮೂರ್ತಿಯ ರೂಪದಲ್ಲಿ ಇರುವುದಿಲ್ಲ ಎಂಬುದನ್ನು ಮನಗಂಡಿದ್ದರು. ದೇವರನ್ನು ಹೇಗೆ ಪರಿಭಾವಿಸಬೇಕು ಎಂಬುದರ ಬಗ್ಗೆ ಎಲ್ಲ ವಚನಕಾರರಲ್ಲಿ ಖಚಿತತೆಯಿತ್ತು. ಪ್ರತಿಯೊಬ್ಬ ವಚನಕಾರನು ಇಷ್ಟಲಿಂಗ, ಇಷ್ಟದೈವವನ್ನು ಹೊಂದಿದ್ದರು. ಲಿಂಗ, ದೈವಗಳಿಗೆ ವಚನಕಾರರು ಹೆಸರಿಡಿದು ಕರೆದುಕೊಂಡಿದ್ದಾರೆ. ಆ ಹೆಸರುಗಳ ದೈವಗಳು ಸ್ಥಳೀಯವಾಗಿ ಸಿಕ್ಕಿರಬಹುದು. ಆ ದೈವಗಳು, ಇಷ್ಟಲಿಂಗಗಳು ಸಂಕೇತವಾಗಿದ್ದವು; ಕುರುಹುಗಳಾಗಿದ್ದವು. ಭಕ್ತನ ಅರಿವಿಗೆ ದಾರಿ ತೋರಿಸುವ ಸಾಕ್ಷಿ ಪ್ರಜ್ಞೆಯಂತೆ ಇದ್ದವು. ಅವು ಅಂತಿಮವಲ್ಲ.

ಕೆಲವು ವಚನಕಾರರು ದೇವರ ಇರುವನ್ನು ನಿಸರ್ಗದಲ್ಲಿ ಕಂಡುಕೊಂಡಿದ್ದಾರೆ. ಅಲ್ಲಮಪ್ರಭು ತನ್ನ ಇಷ್ಟದೈವ ಗುಹೇಶ್ವರನನ್ನು ಕಂಡ ಪರಿಯನ್ನು ಮೇಲಿನ ವಚನದಲ್ಲಿ ನಿರೂಪಿಸಿದ್ದಾನೆ. ಬಸವಣ್ಣ, ದಾಸಿಮಯ್ಯ, ಅಕ್ಕ ಈ ಬಗೆಯ ವಚನಗಳನ್ನು ರಚಿಸಿದ್ದಾರೆ. ಇಂತಹ ವಚನಗಳು ನಿಸರ್ಗದ ಚಿತ್ರಗಳಂತೆ, ಕೈಯಿಗೆ ನಿಲುಕದೆ ಅನುಭವಕ್ಕೆ ಮಾತ್ರ ನಿಲುಕುವ, ಅರಿವನ್ನು ಜಾಗೃತಗೊಳಿಸುವ, ಕಲ್ಪನೆಯನ್ನು ಚುರುಕುಗೊಳಿಸುವ ಸಾಮರ್ಥ್ಯವನ್ನು ಹೊಂದಿವೆ. ಕಾವ್ಯಾತ್ಮಕ ಕವಿತೆಯಾಗಿ ಓದುಗನ ಮನಸ್ಸನ್ನು ಪಕ್ವಗೊಳಿಸುತ್ತವೆ.

ಅಲ್ಲಮನ ಮೇಲಿನ ವಚನವನ್ನು ಓದಿದರೆ ಓದುಗನ ಅರಿವು ಸೃಜನಶೀಲವಾಗುತ್ತದೆ. ಭೂಮಿಯಲ್ಲಿ ನಾನಾ ಬಗೆಯ ಸಂಪತ್ತಿದೆ. ಹೊನ್ನುಯಿದೆ. ನೀರುಯಿದೆ. ಬೆಂಕಿಯಿದೆ. ನಾನಾ ಬಗೆಯ ಲೋಹಗಳು ಇವೆ. ಆದರೆ ಯಾವುದೂ ಮೂರ್ತ ರೂಪದಲ್ಲಿ ಕಾಣುವುದಿಲ್ಲ. ಅರಿವಿಗೆ, ಅನುಭವಕ್ಕೆ ಬರುತ್ತದೆ. ಶೋಧಿಸಬೇಕು, ಪರಿಷ್ಕರಿಸಬೇಕು, ದೇವರು ನೆಲದ ಮರೆಯ ಸಂಪತ್ತಿನಂತೆ ಅಗೋಚರವಾಗಿದ್ದಾನೆ. ಮುಗಿಲ ಮರೆಯಲ್ಲಿ ಮಿಂಚಿದೆ. ಅದರ ಬೆಳಕಿದೆ. ಮಳೆಯ ಮುನ್ಸೂಚನೆಯಾಗಿಯೂ ಅರಿವಿಗೆ ಬರುತ್ತದೆ. ಹಿಡಿಯಲಾಗುವುದಿಲ್ಲ. ಕ್ಷಣ ಹೊತ್ತು ನೋಡಬಹುದು. ನೋಡಿದೆವೆಂಬ ಭಾವ ಹರುಷಗೊಳ್ಳಬಹುದು ಅಷ್ಟೆ. ದೇವರ ನಿಲುವು ಹೀಗೆಯೇ ಬಯಲಲ್ಲಿ ಕಾಣುವ ಬಿಸಿಲ್ಗುದುರೆಗಳು ಕೈಯಿಗೆ ಸಿಗಲಾರವು. ಬಳಿಗೆ ಹೋಗಲಾಗುವುದಿಲ್ಲ. ಇರುವುದು ಮಾತ್ರ ಸತ್ಯ. ದೇವರ ಬಗೆಗಿನ ನಿಲವು ಇದೆ. ಕಣ್ಣು



ತೆರೆದರೆ ಬೆಳಕು, ಮುಚ್ಚಿದರೆ ಬೆಳಕು. ಕಣ್ಣಿನಲ್ಲಿ ಬೆಳಕನ್ನು ಇಟ್ಟವರಾರು? ಕಣ್ಣಿಗೆ ಬೆಳಕು ಕಾಣುತ್ತದೆ. ಬಣ್ಣವಿಲ್ಲ, ರುಚಿಯಿಲ್ಲ, ಸ್ಪರ್ಶವಿಲ್ಲ. ಆದರೂ ಬೆಳಕು ಜೀವಸಂಕುಲಕ್ಕೆ ಸಂಜೀವಿನಿ. ದೇವರ ಇರುವು ಹೀಗೆ ಎಂದು ಅಲ್ಲಮ ಹೇಳುತ್ತಾನೆ. ಈ ವಚನದ ಯಾವ ಉಪಮೆಯನ್ನು ಅನುಮಾನಿಸಲು ಸಾಧ್ಯವಿಲ್ಲ. ಅರಿವಿನ ವಿಸ್ತಾರಕ್ಕೆ ಇಂಬು ಕೊಡುತ್ತದೆ. ಹಾಗೆ ನೋಡಿದರೆ ಅಲ್ಲಮ ಇಷ್ಟು ಸೌಮ್ಯವಾಗಿ ಹೇಳುತ್ತಾನೆ ಎಂಬುದೇ ಅಚ್ಚರಿ. ಲೋಕ ಭಾವಿಸುವ ದೇವರನ್ನು, ವಸ್ತು ಸಾಮಗ್ರಿಗಳಿಂದ ಪೂಜಿಸುವ ದೇವರನ್ನು ಅಲ್ಲಮ ನಿರಾಕರಿಸುವಷ್ಟು ಮತ್ತೊಬ್ಬ ವಚನಕಾರನಿಲ್ಲ.

ಜೇಡರ ದಾಸಿಮಯ್ಯನ ಸುಂದರ ವಚನಗಳು ದೇವರ ಇರುವನ್ನು ಸೂಚಿಸುತ್ತವೆ. ಪ್ರಕೃತಿಯ ನಿದರ್ಶನಗಳನ್ನೇ ಕೊಡುತ್ತಾನೆ. ಒಂದರೊಳಗೊಂದು ಕೂಡಿಕೊಂಡಿದ್ದರೂ ಅವುಗಳ ಭೇದ ಕಣ್ಣಿಗೆ ಕಾಣುವುದಿಲ್ಲ. ಆ ಭೇದವನ್ನು ಭಕ್ತ ತಿಳಿದಾಗಲೇ ದೇವರ ಇರುವಿನ ಅರಿವಾಗುತ್ತದೆ ಎಂಬುದು ದಾಸಿಮಯ್ಯ ನಿಲುವು. 'ಎಣ್ಣೆಯಿದ್ದು ಎಳ್ಳು ನೆನೆಯದ ಭೇದವ, ಕಿಚ್ಚಿದ್ದೂ ಕಲ್ಲು ಹಿಡಿಯದ ಭೇದವ, ಕಾಮವಿದ್ದೂ ಕನ್ನೆಯನುಭವಿಸದ ಭೇದವ....' ಭಕ್ತನಲ್ಲಿಯೂ ದೇವರು ಹೀಗೆಯೇ ನೆಲೆಗೊಂಡಿರುತ್ತಾನೆಂದು ದಾಸಿಮಯ್ಯನ ನಿಲವು. ಭೌತಿಕವಾಗಿ ದೇವರನ್ನು ಕಾಣಲು ಬಯಸಿದವರಲ್ಲ ವಚನಕಾರರು.

ಅಕ್ಕಮಹಾದೇವಿ ತನ್ನ ಮತ್ತು ಚೆನ್ನಮಲ್ಲಿಕಾರ್ಜುನನ ರೂಪವನ್ನು ಕಲ್ಪಿಸಿಕೊಳ್ಳುತ್ತಾಳೆ. ಪ್ರಚಲಿತವಿರುವ ಶಿವನ ರೂಪವನ್ನು ನೆನೆಯುತ್ತಾಳೆ. 'ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು' ಎಂದು ಕನಸನ್ನು ಕಾಣುತ್ತಾಳೆ. 'ಮಿಕ್ಕಿ ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು, ಚೆನ್ನಮಲ್ಲಿಕಾರ್ಜುನಯ್ಯನ ಕಂಡು ಕಣ್ದೆರೆದೆನು' ಎಂದು ಕನವರಿಕೆಯೋ, ಧನ್ಯತೆಯೋ ಅದು ಅಕ್ಕನಿಗೆ ಮಾತ್ರ ಗೊತ್ತು.

**'ಕೂಡಲಸಂಗಮದೇವರ ನಿಲವು**
**ಕನ್ನೆಯ ಸ್ನೇಹದಂತಿದ್ದಿತ್ತು'**

ಭಕ್ತನೊಬ್ಬ ದೇವರ ಜತೆಗೆ ಅನುಸಂಧಾನ ಮಾಡಿದ ಸುಖ ಆ ಭಕ್ತನಿಗೇ ಗೊತ್ತು. ಹಾಗೆಯೇ ಪುರುಷನು ಕನ್ಯೆಯ ಜತೆಗಿನ ಸ್ನೇಹದ ಸುಖ ಆತನಿಗೆ ಮಾತ್ರ ಗೊತ್ತು. ಈ ಸುಖಗಳು ಅಭಿವ್ಯಕ್ತಿಗೆ ಮೀರಿದವುಗಳು.

●

*'ಸೂರು', ಎಂ.ಪಿ. ಪ್ರಕಾಶ ನಗರ, ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ, ಹೊಸಪೇಟೆ – ೫೮೩ ೨೦೧*
*ಬಳ್ಳಾರಿ ಜಿಲ್ಲೆ ಮೊ: ೯೪೮೧೫ ೬೯೪೫೯*

ಮಾತಿನ ಮಾತಿನಲ್ಲಪ್ಪುದೇ ಭಕ್ತಿ?
ಮಾಡಿ ತನು ಸವೆಯದನ್ನಕ್ಕ, ಮನ ಸವೆಯದನ್ನಕ್ಕ,
ಧನ ಸವೆಯದನ್ನಕ್ಕ ಅಪ್ಪುದೇ ಭಕ್ತಿ?
ಕೂಡಲಸಂಗಮದೇವ ಎಲುದೋರೆ ಸರಸವಾಡುವನು:
ಸೈರಿಸದನ್ನಕ್ಕ ಅಪ್ಪುದೆ ಭಕ್ತಿ?

**– ಬಸವಣ್ಣ**

# ಒಂದು ವಚನ ~ ಎರಡು ನೋಟ

ಡಾ. ಲೋಕೇಶ್ ಅಗಸನಕಟ್ಟೆ ಅವರು ಕನ್ನಡದ ಮುಖ್ಯ ಕಥೆಗಾರರೂ ಮತ್ತು ಕಾದಂಬರಿಕಾರರು. ಹಟ್ಟಿ ಎಂಬ ಭೂಮಿಯ ತುಣುಕು, ಮೀಸೆ ಹೆಂಗಸು ಮತ್ತು ಇತರ ಕತೆಗಳು ಇವರ ಮುಖ್ಯ ಕಥಾಸಂಕಲನಗಳು. ಅಮೃತಕ್ಕೆ ಹಾರುವ ಗರುಡ ಅತೀತ ಲೋಕದ ಮಹಾಯಾತ್ರಿಕ ಇವು ಇವರ ಮುಖ್ಯ ಕಾದಂಬರಿಗಳು. ಇವರು ನಿವೃತ್ತ ಕನ್ನಡ ಪ್ರಾಧ್ಯಾಪಕರು.

ಡಾ. ಶಶಿಕಲಾ ಮೊರಬದ ಅವರು ಕನ್ನಡ ಪ್ರಾಧ್ಯಾಪಕರು ಮತ್ತು ಲೇಖಕಿ. ಸ್ತ್ರೀವಾದಿ ಸಾಹಿತ್ಯ ಮತ್ತು ವಿಮರ್ಶೆ ಇವರ ಪ್ರಧಾನ ಆಸಕ್ತಿಯ ಕ್ಷೇತ್ರಗಳು. ಕನ್ನಡ ಕಾದಂಬರಿ ಮತ್ತು ಜನಪ್ರಿಯ ಮಾದರಿಗಳು ಎನ್ನುವ ವಿಷಯದ ಮೇಲೆ ಇವರು ಪಿಹೆಚ್.ಡಿ. ಅಧ್ಯಯನವನ್ನು ಮಾಡಿದ್ದಾರೆ. ನಾಡಿನಾದ್ಯಂತ ಅನೇಕ ವಿಚಾರಸಂಕಿರಣಗಳಲ್ಲಿ ಇವರು ತಮ್ಮ ಪ್ರಬಂಧಗಳನ್ನು ಮಂಡಿಸಿದ್ದಾರೆ.

**ಇಬ್ಬರಿಗೂ ಒಂದೇ ಬಾಣ**
**ಇಬ್ಬರಿಗೊಂದಂಬ ತೊಡುವೆ ಗಡ ಕಾಮಾ**
**ಅರಿದರಿದು**
**ಬಿಲುಗಾರನಹೆಯೋ**
**ಎಸೆದಿಬ್ಬರು ಒಂದನೀಹರು ಗಡ**
**ಇದು ಹೊಸತು**
**ಚೋದ್ಯವೀ ಸರಳ ಪರಿ ನೋಡಾ**
**ಎನಗೆಯೂ ಉರಿಲಿಂಗದೇವಗೆಯೂ ತೊಟ್ಟೆಸು**
**ನಾವಿಬ್ಬರೊಂದಾಗೆ ಬಿಲ್ಲಾಳಹೆ**
**ಎಸೆಯಲೋ ಕಾಮಾ**

## ಒಂದಂಬು ಸಾಲದು!

### ಡಾ. ಲೋಕೇಶ ಅಗಸನಕಟ್ಟೆ

ಹನ್ನೆರಡನೆಯ ಶತಮಾನದ ಶರಣರಲ್ಲಿ ದೈವದ, ಗುರುವಿನ ಮಹತ್ವವನ್ನು ಅರಿತವರಲ್ಲಿ ಉರಿಲಿಂಗಪೆದ್ದಿ ಒಬ್ಬ ಬಹು ಮುಖ್ಯ ವಚನಕಾರ. 'ಹರನು ನರರೂಪ'ದಲ್ಲಿಯೇ ಬಂದಿದ್ದಾನೆಂಬುದು ಅವನ ನಂಬುಗೆ. ಆದರೆ, ಅವನೆಂದೂ ಮರ್ತ್ಯನಲ್ಲ. ಅಂತಹ ಶಕ್ತಿಯು ಗುರು ರೂಪದಲ್ಲಿ ಬಂದು ತನಗೆ 'ಶಿಷ್ಯಂಗೆ ಕರುಣಿಸಿ ದೀಕ್ಷೆಯಂ ಮಾಡಬೇಕೆಂದು ಬಂದನಯ್ಯ'. ಹಾಗೆ ಬಂದವನು ತನ್ನೊಳಗೆ ಒಂದಾದನು ಅಥವಾ ನಾನೇ ಅವನೊಳಗೆ ಒಂದಾದೆ. ಕಾಣುವವರಿಗೆ ಎರಡು ರೂಪ. ಆದರೆ, ಆದದ್ದು ಐಕ್ಯರೂಪ – ಅದು ಒಂದೇ. ಇಂತಹ ಶಿವಮಯ ಚೈತನ್ಯದಿಂದ ಕೂಡಿದ ಭಕ್ತನನ್ನು ಲೋಕಾಸಕ್ತಿಗಳು ಕೆಣಕಲು ಸಾಧ್ಯವೆ? ಕೆಣಕಲುಂಟೆ? ಎಂಬ ದೃಢ ಚಿತ್ತ ಮನಸ್ಸಿನ ನಂಬುಗೆ ಉರಿಲಿಂಗಪೆದ್ದಿಯದು. ಆದರೇನು? ಈ ಕಾಮನೆಂಬ



ಉದ್ಧಟ ಕೆಣಕಲು ನೋಡುತ್ತಿದ್ದಾನೆ. ತನ್ನನ್ನೇ ಕ್ಷೋಭೆಗೆ ಒಳಗು ಮಾಡಲು ಹವಣಿಸುವ ವಿಷಯಂಗಳಿಗೆ ಎಚ್ಚರಿಕೆ ನೀಡುತ್ತಿದ್ದಾನೆ; ಸವಾಲು ಹಾಕಿ ಪಂಥಾಹ್ವಾನ ನೀಡುತ್ತಿದ್ದಾನೆ ಪೆದ್ದಿ.

ಮೃಢನೊಡನಿರುವ ತನ್ನ ದೃಢಸಂಕಲ್ಪದ ಅರಿವಿದ್ದೂ ನನ್ನ ಮೇಲೆ ವಿಷಯಂಗಳ ಬಾಣಗಳನ್ನು ಬಿಡುವೆಯಾ ಬಿಡು – ಎಂದು ನಾಟಕೀಯವಾಗಿ ಆರಂಭವಾಗುವ ಈ ವಚನವು ಮೃಢನು ಭಕ್ತನನ್ನು ಕಾಪಿಡುವನೋ, ಭಕ್ತ ಶಿವನನ್ನು ಕಾಪಿಡುವನೋ – ಎಂಬ ಕುತೂಹಲವನ್ನು ಮೂಡಿಸುತ್ತದೆ. ಭಕ್ತನ ಭಕ್ತಿರಕ್ಷೆಯಿಲ್ಲದ ಹೊತ್ತಲ್ಲಿ ಇದೇ ಕಾಮನ ಶಿವನನ್ನು ಸೋಲಿಸಿದ ಸ್ಮೃತಿ ಅವನಿಗಿದೆ. ಆದರೆ, ಈಗ ಈ ಶಿವ ಭಕ್ತ ಜೊತೆಗಿದ್ದಾನೆ. ಶಿವನನ್ನೂ, ಭಕ್ತನನ್ನು ಈರ್ವರನ್ನು ಮಣಿಸಲು ತನ್ನ ಮೋಹದ ಒಂದು ಅಂಬು ಸಾಕು – ಎಂದು ತಿಳಿದು ಒಂದೇ ಬಾಣದಲ್ಲಿ ಇಬ್ಬರನ್ನು ಸಂಹರಿಸಲು ನೋಡುತ್ತಿದ್ದಾನೆ.

ಒಂದೇ ಬಾಣದಲ್ಲಿ ಇಬ್ಬರನ್ನು ಸಂಹಾರ ಮಾಡುವ ಯೋಚನೆ, ಉಪಾಯ ಸರಳ ಮತ್ತು ಆಶ್ಚರ್ಯಕ್ಕೂ ಕಾರಣವೆ. ಉಪಾಯವೇನೋ ಸರಳವಾಗಿದೆ. ಈ ಮುನ್ನ ಯಾರೂ ಮಾಡಿರದ, ಮುಂದೂ ಮಾಡದ ಪ್ರಯತ್ನವೆ. ಹಿಂದೆ ಬಾಣ ಎಸೆದು ಸುಟ್ಟೆನೆಂಬುದು ಹೇಗೆ ನಿಜವೋ ಹಾಗೆ ತಾನೂ ಸುಟ್ಟು ಹೋದೆನೆಂಬುದೂ ಅಷ್ಟೇ ನಿಜ. ಆಗ ಶಿವ ತಾನೊಬ್ಬನೇ ಇದ್ದ. ಆದರೆ, ಈಗ ನಾನು ಉರಿಲಿಂಗದೇವನೂ ಜೊತೆಯಾಗಿದ್ದೇವೆ. ನೀನು ಬಾಣವನ್ನು ತೊಟ್ಟು ನಮ್ಮ ಮೇಲೆ ಬಿಟ್ಟರೂ ಅದನ್ನೀಗ ದೃಢವಾಗಿ ಎದುರಿಸುತ್ತೇವೆ. ಏಕೆಂದರೆ 'ನಾವಿಬ್ಬರೊಂದಾಗಿ' ಬಿಲ್ಲಾಳುಗಳಾಗಿದ್ದೇವೆ. ಚಿತ್ತದಲ್ಲಿ ಚಾಂಚಲ್ಯವಿಲ್ಲದ ಭಕ್ತನ ಒಡಗೂಡಿ ಶಿವನೂ ಕಾಮನಬಾಣದಿಂದ ಪಾರಾಗಿ ಹೋದ. ಶಿವ ಇಲ್ಲಿ ಭಕ್ತನನ್ನು ಕಾಪಾಡಿದ್ದಕ್ಕಿಂತ ತನ್ನ ಶಿವನನ್ನು ಭಕ್ತನೇ ತನ್ನ ಅಚಲ ಭಕ್ತಿ, ದೃಢ ಸಂಕಲ್ಪ ಮತ್ತು ಶ್ರದ್ಧೆಯಿಂದ ಕಾಪಾಡಿಕೊಂಡ. 'ತೊಡುವೆ ಗಡಾ ಕಾಮಾ' – ಎಂದದ್ದು ಕೊನೆಗೆ 'ಎಸೆಯಲೋ ಕಾಮ' – ಎಂಬ ಪಂಥಾಹ್ವಾನವನ್ನು ನೀಡುವ ರೀತಿಯೇ ಅನನ್ಯವಾದುದು.

ಪುರಾಣ, ಸ್ಮೃತಿ, ಐತಿಹ್ಯಗಳ ಬಳಿವಿಡಿದು ಬರುವ ಕಥನಗಳ ತಿರುಗುಮುರುಗಾಗಿಸಿ ನೋಡುವುದೇ ವಚನಕಾರರ ಮುರಿದು ಕಟ್ಟುವ ರೀತಿ. ಅದರ ಜೊತೆಯಲ್ಲಿ ಭಕ್ತಿಯ ಮಹತ್ವ ಮತ್ತು ಗುರು ಮಾರ್ಗ – ಎರಡನ್ನೂ ಈ ವಚನ ವಿಶಿಷ್ಟ ರೀತಿಯಲ್ಲಿ ಮಂಡಿಸಿದೆ. ಎಷ್ಟು ಅಂಬುಗಳನ್ನೆಸೆದರೂ ಅಚಲ ಹಿಮಾಚಲ ಕುಲಾಚಲದಂತೆ ಭಕ್ತನ ಮನಸ್ಥಿತಿಯೆಂಬುದನ್ನು ಪ್ರಮಾಣೀಕರಿಸುತ್ತದೆ. ●

*ದಶಮಿ, ತರಳಬಾಳು ಬಡಾವಣೆ, ಚಿತ್ರದುರ್ಗ – ೫೭೭ ೫೦೨*
*೯೪೪೮೦ ೧೩೩೩೩*

## ಇಬ್ಬರಿಗೂ ಒಂದೇ ಬಾಣ

### ಡಾ. ಶಶಿಕಲಾ ಮೊರಬದ

ವಚನ ಸಾಹಿತ್ಯ ೧೨ ಶತಮಾನದಿಂದ ಈ ಹೊತ್ತಿನವರೆಗೂ ಮತ್ತೆ ಮತ್ತೆ ಚರ್ಚೆಗೆತ್ತಿಕೊಳ್ಳುತ್ತಿರುವ ಸಾಹಿತ್ಯ. ಧಾರ್ಮಿಕ, ಸಾಮಾಜಿಕ, ವೈಚಾರಿಕ, ಸಾಹಿತ್ಯಿಕ ಸಂಗತಿಗಳಿಗಾಗಿ ವಚನ ಸಾಹಿತ್ಯ ಚಿಂತನೆಗೆ ಒಳಗಾಗುತ್ತ ಬಂದಿದೆ. ಈ ಎಲ್ಲದರ ಜೊತೆಗೆ ವಚನ ಸಾಹಿತ್ಯ ನಮ್ಮೊಳಗೆ ಪ್ರಶ್ನೆಗಳನ್ನು ಹುಟ್ಟು ಹಾಕುವ ಕಾರಣಕ್ಕೆ ಈ ಹೊತ್ತಿಗೂ ಮುಖ್ಯವಾಗುತ್ತದೆ.

ಲೇಖನ ಚಿಹ್ನೆಗಳಿರದ ವಚನಗಳಿಗೆ ನಾವು ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕುತ್ತ ಹೋದರೆ ಹೆಚ್ಚಿನ ಎಲ್ಲ ವಚನಗಳೂ ಪ್ರಶ್ನೆಗಳಾಗುತ್ತವೆ. ವಚನಕಾರರು ಸಾಂದರ್ಭಿಕವಾಗಿ ವಚನಗಳನ್ನು ರಚಿಸಿದ್ದು ತಿಳಿದ ಸಂಗತಿಯೇ. ನಡೆ-ನುಡಿಯನ್ನು ಒಂದಾಗಿಸುಕೊಳ್ಳುವ ಪ್ರಾಮಾಣಿಕ ಪ್ರಯತ್ನ, ದುಡಿದು ತಿನ್ನಬೇಕೆನ್ನುವ ಆಲೋಚನೆ, ದುಡಿದಿದ್ದನ್ನು ಹಂಚಿಕೊಳ್ಳಬೇಕೆನ್ನುವ ಮನೋಭಾವ, ತರತಮ ಬೇಧವಿಲ್ಲದೆ ಸಮಾಜದ ಎಲ್ಲರೂ ಮನುಷ್ಯರಾಗಿ ಬದುಕಬೇಕೆನ್ನುವ ಹಂಬಲದ ಸಾಮೂಹಿಕ ಸಂಚಲನ ಆ ಕಾಲಕ್ಕೆ ಹೊಸ ದಿಕ್ಕನ್ನು ತೋರಿದ್ದು ಇಂದು ಚರಿತ್ರೆ. ಇಷ್ಟಲ್ಲದೆ ತಮ್ಮ ಕಾಲದಲ್ಲಿಯೆ ತಾವು ಕಟ್ಟಿಕೊಂಡ ತಾತ್ವಿಕತೆಯ ವೈರುಧ್ಯಗಳನ್ನು ತಮ್ಮ ವಚನಗಳ ಮೂಲಕ ಅಭಿವ್ಯಕ್ತಿಸಿರುವುದನ್ನು ಕಾಣಬಹುದು.

ಉರಿಲಿಂಗದೇವನ ಮೇಲಿನ ವಚನ ಹೀಗೆ ಪ್ರಶ್ನೆಯ ಚಿಹ್ನೆಯನ್ನು ಒಳಗೊಳ್ಳಬಹುದಾದ ವಚನ. ಉರಿಲಿಂಗದೇವ ಅವಸೆ ಕಂಧಾರ ಗ್ರಾಮದ ವಚನಕಾರ. ಉರಿಲಿಂಗಪೆದ್ದಿ ಇವನ ಶಿಷ್ಯ. ವಚನಕಾರರು ತಮ್ಮ ಕಾಲದಲ್ಲಿ ಕಟ್ಟಿಕೊಂಡ ಶರಣ ಸತಿ ಲಿಂಗ ಪತಿ ಭಾವವನ್ನು ತನ್ನ ವಚನಗಳಲ್ಲಿ ಮುಖ್ಯ ಮಾಡಿಕೊಂಡು ಈತ ವಚನಗಳನ್ನು ರಚಿಸಿದ್ದಾನೆ. ಲಿಂಗಾಂಗ ಸಾಮರಸ್ಯ ಇವನ ಎಲ್ಲ ವಚನಗಳಲ್ಲಿ ಕಾಣಸಿಗುತ್ತದೆ. ಈ ವಚನದ ಪ್ರಾರಂಭದಲ್ಲಿ ಬರುವ ಇಬ್ಬರು ಅಂಗ-ಲಿಂಗ, ಶರಣ-ಭಗವಂತ, ಆಕಾರ-ನಿರಾಕಾರ, ಜಡ-ಚೇತನ, ಪ್ರಕೃತಿ-ಪುರುಷ, ಸತಿ-ಪತಿ-ಹೀಗೆ ವೈರುಧ್ಯಗಳಲ್ಲಿರುವ ಯಾರಾದರೂ ಆಗಿರಬಹುದು. ಎರಡಳಿದು ಒಂದಾಗಬೇಕೆನ್ನುವ ಭಾವ ಉರಿಲಿಂಗದೇವನದು. ಅಂಗ ಮತ್ತು ಲಿಂಗ ಎರಡನ್ನು ಬೇರೆ ಎಂಬುದನ್ನೇ ಪ್ರಶ್ನಿಸುವ ಈತ ಅಂಗವುಳ್ಳವ, 'ಅನಾದಿ ಆತ್ಮಂಗೆಂ ಪಾಶಂಗಳುಂಟು, ಆತ್ಮ ಪಶು ಪಾಶ ಮಾಯೆ ಪತಿ ಶಿವ' ಎಂಬರು. ಆದರೆ ಇಂಥ ಭೇದವನ್ನು ಹುಸಿ ಎನ್ನುವ ಉರಿಲಿಂಗದೇವ 'ಅಭೇದವಿಲ್ಲದೆ ಭೇದವಿಲ್ಲ' ಎನ್ನುತ್ತಾನೆ. ಅಂಗ ಲಿಂಗದ ಸಂಬಂಧ ದೀಪ ದೀಪದ ಪ್ರಭೆಯಂತೆ, ರತ್ನ ರತ್ನದ ಕಾಂತಿಯಂತೆ ಎನ್ನುವ ಅಭಿಪ್ರಾಯದ ವಚನಕಾರ ಪ್ರಸ್ತುತ ವಚನದಲ್ಲಿ ಅಂಗವನ್ನು ಹೊಂದಿರುವ ಜೀವದ ಮೇಲೆ ಕಾಮನ ಬಾಣ ಪ್ರಯೋಗವಾಗುವುದಾದರೆ ಆಗಲಿ ಎನ್ನುತ್ತಾ ಕಾಮನ ಜೊತೆಗೆ ಸಂವಾದಕ್ಕಿಳಿಯುತ್ತಾನೆ. ಅಸಮಾನತೆಯ ಲೌಕಿಕ ಜಗತ್ತು, ಜೀವ ಮತ್ತು ಲಿಂಗವನ್ನು ಭಿನ್ನ ಎಂದು ಗುರುತಿಸುವುದಾದರೆ ಸರಿ. ಆದರೆ ಬಾಣ ಪ್ರಯೋಗ ಜೀವನಿಗೆ ಮಾತ್ರ ಏತಕ್ಕೆ ಎನ್ನುವ ಪ್ರಶ್ನೆಯ ಮೂಲಕ ಮಾತನಾಡುವ ವಚನಕಾರ ಇಬ್ಬರಿಗೆ ಒಂದು ಅಂಬನ್ನು ತೊಡಲು ಹೇಗೆ ಸಾಧ್ಯವಾಗುತ್ತದೆ ಎಂಬ ವಿಚಾರವನ್ನು ವ್ಯಕ್ತಪಡಿಸುತ್ತಾನೆ. ಇಲ್ಲಿ ಬರುವ ಅರಿದರಿದು ಎಂಬ ಪದ ಪ್ರಯೋಗ ದೇವನೊಳಗೂ ಕಳೆದುಕೊಳ್ಳಬೇಕಾದ ಸಂಗತಿಗಳಿರಬಹುದು ಎಂಬ ಸೂಕ್ಷ್ಮದತ್ತ ನಮ್ಮನ್ನು ನೋಡುವಂತೆ ಮಾಡುತ್ತದೆ. ವಚನಕಾರರು ದೇವರಿಗೆ ಸವಾಲನ್ನು ಹಾಕಿದ್ದು ಹೊಸದೇನಲ್ಲ. ಕಾಯಗೊಂಡವರ ಸಂಕಟಗಳನ್ನು ಅರಿಯಬೇಕಾದರೆ ಕಾಯವನ್ನು ಒಳಗೊಳುವುದು ಅನಿವಾರ್ಯ ಮತ್ತು ಹಾಗಾದಾಗ ಮಾತ್ರ ಜೀವದ ಸಂಕಟಗಳು ಅರಿವಾಗುತ್ತದೆ. ಅಲ್ಲದೆ ಆದಿ-ಅನಾದಿ ಒಂದೇ ಸ್ವರೂಪದ ಎರಡಂಶಗಳು ಎಂದಾಗ ಅಂಬಿನ ಪ್ರಯೋಗ ಕೇವಲ ಒಬ್ಬರಿಗೆ ಸಾಕೇ ಎನ್ನುವುದು ಇಲ್ಲಿಯ ವಿಚಾರ. ಕಾಮನನ್ನು ಬಾಣ ಪ್ರಯೋಗಿಸಬೇಡ ಎನ್ನೋಣವೆಂದರೆ ಅದು ಆಗದ ಮಾತು, ಕಾಮವನ್ನು ದಾಟಿಯೇ ನಿಷ್ಕಾಮವಾಗಬೇಕಾದ ಅನಿವಾರ್ಯತೆಯಲ್ಲಿ ಕಾಮನ ಅಂಬನ್ನು ಎದುರಿಸುವುದೇ ಆದಲ್ಲಿ ಅದನ್ನು ಒಬ್ಬರ ಮೇಲೆ ಪ್ರಯೋಗಿಸಿ ಸಮರ್ಥನಾದ ಬಿಲ್ಲಾಳು ಎನಿಸಿಕೊಳ್ಳಲು ಹೇಗೆ ಸಾಧ್ಯ. ಎಸೆದಿ ಬ್ಬರು ಒಂದನೀಹರು ಎಂಬಲ್ಲಿ ಎರಡರ್ಥಗಳು ವ್ಯಕ್ತವಾಗುತ್ತವೆ. ಇಬ್ಬರು ಒಂದ ನೀಹರು ಎಂದಾಗಿ, ಒಂದನ್ ಈಹರು ಎಂದಾಗಿ ಗ್ರಹಿಸಿಕೊಂಡಾಗ ಕೊಡುವ-ಬಿಡುವ ಎರಡರ್ಥಗಳನ್ನು ವಚನ ಕಾಣಿಸುತ್ತದೆ. ಮುಂದಿನ ಸಾಲುಗಳಲ್ಲಿ ಕಾಮನಿಗೆ ಹೇಳುವ ಮಾತುಗಳಿವೆ. ಬಾಣ ಪ್ರಯೋಗದ ಹೊಸ ನೆಲೆಯಾವುದೇಂದರೆ ಜೀವನಿಗೂ ದೇವನಿಗೂ ಬಾಣ ಬಿಡುವ ನೆಲೆ. ಹಾಗೆ ಬಾಣ ಪ್ರಯೋಗಿಸಿದಾಗ ಆ ಬಾಣದ ಪರಿಣಾಮದ ಸಂಘರ್ಷವನ್ನು ದಾಟಿ ಇಬ್ಬರು ಒಂದಾಗುವ ಪರಿಯೇ ಕಾಮನಿಗೂ ಸವಾಲನ್ನು ಒಡ್ಡುವಂಥದ್ದು ಮತ್ತು ಸಾರ್ಥಕತೆಯನ್ನು ತಂದು ಕೊಡುವಂಥದ್ದು. ಆಗ ಮಾತ್ತ ಕಾಮ ಒಳ್ಳೆಯ ಬಿಲ್ಲಾಳು ಎಂದೆನಿಸಿಕೊಳ್ಳಲು ಸಾಧ್ಯ ಎನ್ನುತ್ತಲೇ, ಮತ್ತೆ ವಚನ ಕಡೆಯ ಸಾಲಿನಲ್ಲಿ ಕಾಮನಿಗೆ 'ಎಸೆಯಲೋ ಕಾಮ' ಎಂದು ಆಹ್ವಾನವನ್ನು ನೀಡುವುದರ ಮೂಲಕ ಎರಡಳಿದು ಒಂದಾದ ಭಾವದಲ್ಲಿ ಯಾರ ಹಂಗೂ ಇಲ್ಲದ ನಿರ್ಭಯವನ್ನು ಸೂಚಿಸುತ್ತದೆ. ಸತಿ ಪತಿ ಭಾವದ ಹಿನ್ನೆಲೆಯಲ್ಲಿ ಈ ವಚನವನ್ನು ಗ್ರಹಿಸಿಕೊಂಡಾಗ ತನ್ನ ಅಹಃ ಕಳೆದುಕೊಂಡು ಪತಿಯಲ್ಲಿ ಒಂದಾಗಬೇಕಾದ್ದು ಸತಿಗೆ ಮಾತ್ರವಲ್ಲದೆ, ತನ್ನೊಳಗಿನ ಪತಿಯ ಅಹಃ ಕಳೆದುಕೊಳ್ಳುವುದು, ನಾನು ಹೋಗಿ ನಾವು ಆಗುವುದು ಮುಖ್ಯ ಎಂಬುದು ಇಡೀ ವಚನವನ್ನು ವರ್ತಮಾನಕ್ಕೆ ಅನ್ವಯವಾಗುವಂತೆ ಮಾಡುತ್ತದೆ. ಪ್ರತಿಯೊಬ್ಬರು ತಮ್ಮ ತಮ್ಮ ಅಹಃ ಬಿಟ್ಟಾಗ ಮಾತ್ರ ಒಂದಾಗಲು ಸಾಧ್ಯ. ಆಗ ಮಾತ್ರ ಆಧ್ಯಾತ್ಮಿಕ ನೆಲೆಯಲ್ಲಿ ಮತ್ತು ಲೌಕಿಕ ನೆಲೆಯಲ್ಲಿ ಸಾರ್ಥಕತೆಯನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತದೆ. ಹೀಗಾಗಿ ಉರಿಲಿಂಗದೇವ ಕಾಮನಿಗೆ ಕೊಡುವ ನಿರ್ದೇಶನ, ಆ ಮೂಲಕ ಕಾಮ ತನ್ನ ಉದ್ದೇಶವನ್ನು ಪೂರೈಸಿಕೊಂಡಾಗ ಅಂತಿಮವಾಗಿ ಎರಡಳಿದು ಒಂದಾಗುವಲ್ಲಿ ಹುಟ್ಟಿಕೊಳ್ಳುವ ಪ್ರೇಮದ ಭಾವದ ಅಗತ್ಯ ಹನ್ನೆರಡನೆಯ ಶತಮಾನದ ಜೊತೆಗೆ ಇಂದಿಗು ಇದೆ. ●

ಎಮ್-೧೭, ಟಿಪಿಎ, ೪/ಇ ಅಡ್ಡರಸ್ತೆ, ಬೃಂದಾವನ ಸೆಕ್ಟರ್, ನವನಗರ
ಬಾಗಲಕೋಟೆ - ೫೮೭ ೧೦೩ ೯೪೪೯೭ ೨೪೪೯೦

"ಅನುಭಾವ"ವೆಂಬುದು ಮನುಕುಲದ ಚರಿತ್ರೆಯಷ್ಟು ಹಳೆಯದು. ಮನುಷ್ಯನಲ್ಲಿ ಕನಿಷ್ಠ ತಿಳುವಳಿಕೆ, ಬುದ್ಧಿ-ಭಾವನೆಗಳು ಬೆಳೆದು, ಅವನು ನಿರ್ದಿಷ್ಟ ಗುರಿಯನ್ನು ಪಡೆದಾಗ ದಿನನಿತ್ಯದ ಬದುಕಿನ ಅನುಭವ ಪರಿಪಕ್ವಗೊಂಡು ಉಂಟಾದ ಸತ್ಯ ಆನಂದದ ಅಭಿವ್ಯಕ್ತಿಯೇ ಅನುಭಾವ. ಇದರ ಅಂತಿಮ ಗುರಿ ಸತ್ಯದ ಸಾಕ್ಷಾತ್ಕಾರವೇ ಆಗಿದೆ. ಮನುಕುಲದ ಏಳಿಗೆಯಲ್ಲಿ ಇದು ಪ್ರಮುಖವಾದ ಪಾತ್ರವಹಿಸಿದೆ. ಪ್ರತಿಯೊಂದು ಮತ-ತತ್ವದ, ಸಿದ್ಧಾಂತ-ದರ್ಶನಗಳ ದರ್ಶನವೇ ಅನುಭಾವ.

ಡಾ. ಬಸವರಾಜ ಬಲ್ಲೂರು

## ಬಸವಣ್ಣನ ನೆನೆಯದೆ ಮಾಡುವ ಭಕ್ತಿ ಎಳತಟವಯ್ಯಾ

ವಿಶ್ವಾರಾಧ್ಯ ಸತ್ಯಂಪೇಟೆ

ವಿಶ್ವ ಗುರುಗಳಲ್ಲಿ ಅಗ್ರಗಣ್ಯರಾದ ಬಸವಣ್ಣನವರನ್ನು ಬಹಳಷ್ಟು ಜನ ಭಕ್ತಿ ಭಂಡಾರಿ ಎಂದು ಹಾಡಿ ಹೊಗಳಿ ಅವರನ್ನು ಭಕ್ತಿಯ (ನಾವು ತಪ್ಪಾಗಿ ಭಾವಿಸಿರುವ) ಪಥದಲ್ಲಿ ಮಾತ್ರ ಕೂರಿಸಿ ಕೈತೊಳೆದುಕೊಳ್ಳಲು ಬಯಸುತ್ತಾರೆ. ಭಕ್ತಿ ಎಂದರೆ ಕೇವಲ ಧಾರ್ಮಿಕ ಆಚರಣೆಗಳಾದ ವ್ರತವನ್ನು ಮಾಡುವುದು, ಹರಕೆ ಹೊರುವುದು, ವಿವಿಧ ಬಗೆಯ ಮಂತ್ರಗಳನ್ನು ದೇವರ ಮುಂದೆ ಹೇಳುವುದು, ಹಲವಾರು ನೇಮಗಳನ್ನು ಇಟ್ಟುಕೊಳ್ಳುವುದು ಭಕ್ತಿ ಎಂದು ಅರಿತುಕೊಂಡಿದ್ದ ಸಂದರ್ಭದಲ್ಲಿ ಭಕ್ತಿಯೆಂಬ ಪದಕ್ಕೆ ವಿಶೇಷ ಅರ್ಥವನ್ನು ಬಸವಣ್ಣನವರು ತಂದುಕೊಟ್ಟರೆಂಬುದರಲ್ಲಿ ಎರಡು ಮಾತಿಲ್ಲ. ಆದರೆ ಬಸವಣ್ಣನವರಂತಹ ಭಕ್ತಿಯನ್ನು ಹಿಂದೆ ಯಾರೂ ಮಾಡಿಲ್ಲ. ಮುಂದೆಯೂ ಯಾರಾದರೂ ಮಾಡುತ್ತಾರೆಂಬ ನಂಬಿಕೆ ನನ್ನಲ್ಲಿ ಇಲ್ಲ. ಬಸವಣ್ಣನವರ ಭಕ್ತಿ ಕಾಣದ ಯಾವುದೋ ಅಗೋಚರ ಶಕ್ತಿಯನ್ನು (ದೇವರನ್ನು) ಕೇಳುವುದು, ಒಲಿಸಿಕೊಳ್ಳುವುದು ಅಥವಾ ಅದರ ಒಲುಮೆ ಪಾತ್ರವಾಗುವುದು ಇರಲಿಲ್ಲ. ಭಕ್ತಿಯ ಹೆಸರಿನಲ್ಲಿ ದೇವರ ಮುಂದೆ ದೀಪ ಹಚ್ಚುವುದು, ನೈವೇದ್ಯ ಸಲ್ಲಿಸುವುದು, ನಾನಾ ರೀತಿಯಲ್ಲಿ ತನ್ನನ್ನು ದೈಹಿಕವಾಗಿ ಮಾನಸಿಕವಾಗಿ ಹಿಂಸೆಗೆ ಗುರಿ ಪಡಿಸಿಕೊಂಡು ದೇವರಿಗೆ ಅರ್ಪಿಸುತ್ತೇನೆಂಬ ಮೌಢ್ಯದ ಭಕ್ತಿಯಾಗಿರಲಿಲ್ಲ.

ಭಕ್ತ ಕುಂಬಾರ ಮಣ್ಣು ತುಳಿಯುವಾಗ ದೇವರಲ್ಲಿ ಅನುರಕ್ತನಾಗಿ, ತನ್ನ ಮಗು ತನ್ನತ್ತ ಬಂದುದನ್ನು ಗಮನಿಸಿದೆ ಭಾವಾವೇಶದಲ್ಲಿ ಅದರ ಸಾವಿಗೆ ಕಾರಣವಾಗುತ್ತಾನೆ. ಭಕ್ತ ಸಿರಿಯಾಳ ತನ್ನ ಮಗನ ತಲೆಯನ್ನು ಕಡಿದು ಮಾಂಸದ ಅಡಿಗೆಯನ್ನು ದೇವರಿಗೆ ಅರ್ಪಿಸುತ್ತಾನೆ. ಹಲವಾರು ಜನರು ತಾವು ಕೈ ಹಿಡಿದ ಮಡದಿಯನ್ನು ದೇವರಿಗೆ ಕೊಡುಗೆಯಾಗಿ ಕೊಡುತ್ತಾ ಸಂತೃಪ್ತಿಯಿಂದ ಇರುತ್ತಾರೆ. ವಿವೇಚನೆಯಿಲ್ಲದ ಭಕ್ತಿ ತನ್ನನ್ನು ಹಾಗೂ ಇತರರನ್ನು ಘಾಸಿಗೊಳಿಸುತ್ತದೆ. ಅಲ್ಲದೆ ಇದು ಭಕ್ತಿಯಲ್ಲವೇ ಅಲ್ಲ. ಭಕ್ತಿಯ ಹೆಸರಿನಲ್ಲಿ ಧಾರ್ಮಿಕ ವೇಷಧಾರಿಗಳು ಜನ ಸಾಮಾನ್ಯರನ್ನು ಯಾಮಾರಿಸುವ ತಂತ್ರವೆಂಬುದು ಬಸವಣ್ಣನವರಿಗೆ ಪಕ್ಕಾ ಗೊತ್ತಿತ್ತು. ಹೀಗಾಗಿ ಬಸವಣ್ಣನವರ ಭಕ್ತಿ ಇವರೆಲ್ಲರಿಗಿಂತಲೂ ತುಂಬಾ ಭಿನ್ನವಾಗಿತ್ತು.

ಸಚರಾ ಚರಗಳಲ್ಲೂ ದೇವರು ಅಡಗಿದ್ದಾನೆ ಎಂದು ಭಾವಿಸುವುದಾದರೆ, ಆ ದೇವರು ನಮ್ಮಲ್ಲಿಯೂ ಇದ್ದಾನೆ ಎಂಬುದು ಬಸವಣ್ಣನವರ ಖಚಿತ ಮಾತಾಗಿತು. ದೇಹವೆಂಬುದು ದೇವಾಲಯ ಮಾಡಿಕೊಂಡರೆ ಅಲ್ಲಿ ಕಾಯಾ ವಾಚಾ ಮನಸಾ ಇನ್ನೊಂದಕ್ಕೆ ದೂರುವ ಅವಕಾಶವೇ ಇಲ್ಲ. ಈ ದೇಹದ ರೂಪದಲ್ಲಿ ಆತ ನಮಗೆ ಏನೆಲ್ಲ ಕೊಟ್ಟಿದ್ದಾನೆ. ಬುದ್ಧಿ ಭಾವ ಕ್ಷಮತೆ ಸ್ಮರಣೆ ವಿವೇಕ ಶಕ್ತಿ ಮರೆವು ಅರಿವು ಎಲ್ಲವೂ ಇವೆ. ಅವನ್ನು ಬಳಸಿಕೊಂಡು ಮೇಲೇಳಬೇಕಾದವರು ನಾವು. ನಮ್ಮೊಳಗೆ ಇರುವ ಅಗಣಿತ ಶಕ್ತಿಯನ್ನು ಕಡೆಗಣಿಸಿ ಸ್ಥಾವರ ದೇವರುಗಳಿಗೆ ಎರಗುವುದು ಸರ್ವಥಾ ತಪ್ಪು ಎಂಬುದು ಬಸವಣ್ಣನವರ ಅಭಿಮತ.

**ಮಡಕೆ ದೈವ ಮೊರ ದೈವ,ಬೀದಿಯಕಲ್ಲು ದೈವ**
**ಹಣಿಗೆ ದೈವ, ಬಿಲ್ಲನಾರಿ ದೈವ ಕಾಣಿರೊ**
**ಕೊಳಗ ದೈವ, ಗಿಣ್ಣಿಲು ದೈವ ಕಾಣಿರೊ**
**ದೈವ ದೈವವೆಂಬುದು ಕಾಲಿಡಲಿಂಬಿಲ್ಲ**



**ದೈವನೊಬ್ಬನೆ ಕೂಡಲಸಂಗಮದೇವಾ**

ಅಯ್ಯೋ, ನಮ್ಮ ಸ್ಥಿತಿ ತುಂಬಾ ಚಿಂತಾಜನಕ. ಹಲವಾರು ಧರ್ಮಗಳು ಭಯವನ್ನೆ ತಮ್ಮ ಬಂಡವಾಳವನ್ನಾಗಿ ಮಾಡಿಕೊಂಡಿವೆ. ಜನರನ್ನು ಅಜ್ಞಾನದ ಕತ್ತಲೆಯಲ್ಲಿಟ್ಟು, ದೇವರ ಹೆಸರಿನ ಮೇಲೆ ತಮ್ಮ ಗೋಪಾಳವನ್ನು ತುಂಬಿಕೊಳ್ಳುವ ಹುನ್ನಾರ. ನಾವು ನಿತ್ಯ ಪ್ರತಿಕ್ಷಣವು ಬಳಸುವ ಎಲ್ಲವೂ ಅವನ ಕೊಡುಗೆಯೆ, ಇದರಲ್ಲಿ ಎರಡು ಮಾತಿಲ್ಲ. ಆ ವಸ್ತುಗಳನ್ನು ಚೆನ್ನಾಗಿ ಬಳಸಿ ಶುಚಿತ್ವದಿಂದ ಇಡಬೇಕೆ ಹೊರತು, ಅವುಗಳನ್ನು ಪೂಜಿಸುವುದರಿಂದಲ್ಲ. ಮಡಕೆಯನ್ನು ದೇವರೆಂದು ಪೂಜಿಸಿದರೆ ಅದರಿಂದ ಅದಕ್ಕೆ ಯಾವುದೆ ಲಾಭವಾಗಲಿ ನಷ್ಟವಾಗಲಿ ಇಲ್ಲ. ಆ ಮಡಕೆಯನ್ನು ಗೌರವಾರ್ಹವಾಗಿ ಬಳಸಿಕೊಂಡು ಅಟ್ಟುಣ್ಣಬೇಕು. ಏಕೆಂದರೆ ಕುಂಬಾರನಾದವನು ಅದನ್ನು ಕಲಾತ್ಮವಾಗಿ, ತನ್ನ ಪರಿಶ್ರಮದ ಮೂಲಕ ರೂಪಿಸಿದ್ದಾಗಿದೆ. ಆ ಮಡಕೆಯನ್ನು ನಾವು ಸಕಾರಾತ್ಮಕ ಕ್ರಿಯೆಗೆ ಬಳಸಿಕೊಳ್ಳಬೇಕಾದುದು ನ್ಯಾಯ.

ಸಚರಾಚರದಲ್ಲೂ ಆತನ ಪ್ರತಿಬಿಂಬ ಇದ್ದೇ ಇದೆ ಎಂದು ಒಪ್ಪಿಕೊಂಡಾದ ಮೇಲೆ ಎಲ್ಲವನ್ನು ಆತನ ಆಶೀರ್ವಾದ ಎಂದು ಅರಿತು ನಡೆಯಬೇಕು. ಆದರೆ ಬೀದಿಯ ಕಲ್ಲು, ಕಟ್ಟೆಯ ಕಲ್ಲು, ಜಗುಲಿ ಮೇಲಿನ ಕಲ್ಲು ವಿಶೇಷವೆಂದು ಪೂಜಿಸುವುದರಿಂದ ಯಾರಿಗೆ ಏನೂ ದೊರೆಯದು. ಕೊಳಗ, ಗಿಣ್ಣಿಲು ಮುಂತಾದವುಗಳನ್ನು ಪೂಜಿಸುವುದರಿಂದ ಸಮಯ ವ್ಯರ್ಥ. ನಮ್ಮ ಬುದ್ಧಿ ಭಾವಕ್ಕೆ ನಮಗೆ ನಾವೇ ಕಲ್ಲು ಚಪ್ಪಡಿ ಎಳೆದುಕೊಂಡಂತೆ ಎಂದು ಬಸವಣ್ಣನವರಿಗೆ ಪಕ್ಕಾ ಖಾತ್ರಿಯಾಗಿತ್ತು.

**ಹಾಳು ಮೊರಡಿಗಳಲ್ಲಿ ಊರ ದಾರಿಗಳಲ್ಲಿ**
**ಕೆರೆ ಬಾವಿ ಹೂಗಿಡು ಮರಂಗಳಲ್ಲಿ**
**ಗ್ರಾಮ ಮಧ್ಯಂಗಳಲ್ಲಿ ಜಲಪಥ ಪಟ್ಟಣ ಪ್ರವೇಶದಲ್ಲಿ**
**ಹಿರಿಯಾಲದ ಮರದಲ್ಲಿ ಮನೆಯ ಮಾಡಿ**
**ಕರೆವೆಮ್ಮೆಯ ಹಸುಗೂಸು ಬಸುರಿ ಬಾಣಂತಿ**
**ಕುಮಾರಿ ಕೊಡಗೂಸು ಎಂಬವರ ಹಿಡಿದುಂಬ**
**ತಿರಿದುಂಬ ಮಾರಯ್ಯ ಬೀರಯ್ಯ ಕೇಚರ ಗಾವಿಲ**
**ಅಂತರ ಬೆಂತರ ಕಾಳಯ್ಯ ಮಾರಯ್ಯ ಮಾಳಯ್ಯಾ**
**ಕೇತಯ್ಯಗಳೆಂಬ ನೂರು ಮಡಕೆಗೆ ನಮ್ಮ ಕೂಡಲಸಂಗಮದೇವ**
**ಶರಣೆಂಬುದೊಂದೆ ದಡಿ ಸಾಲದೆ.**

ಅನ್ವೇಷಣೆಯಲ್ಲಿ, ಚಿಕಿತ್ಸಕ ಶಕ್ತಿಯಲ್ಲಿ ಹಲವಾರು ಸತ್ಯಗಳನ್ನು ಪ್ರಕೃತಿಯಿಂದ ತನ್ನ ಉಪಯೋಗಕ್ಕೆ ಬಳಸಿಕೊಂಡ ಮನುಷ್ಯ, ಒಳಗೊಳಗೆ ಭಯಪಡತೊಡಗಿದೆ. ಆ ಬಳಕೆಗೊಂಡ ವಸ್ತುಗಳೇನಾದರೂ ಮನಸಿಕೊಂಡು ನಮ್ಮಿಂದ ದೂರ ಸರಿದು ಹೋದರೆ? ಅಥವಾ ಕೈ ತಪ್ಪಿ, ಕಣ್ತಪ್ಪಿ ಎಲ್ಲೋ ಅವಿತುಕೊಂಡರೆ ಆಗೇನು ಮಾಡಬೇಕು? ಎಂಬ ದುಗುಡ ಆತನನ್ನು ಭಯಭೀತನನ್ನಾಗಿ ಮಾಡಿತು. ಹಾಗಾಗಿ ಕಂಡ ಕಂಡ ವಸ್ತುಗಳಲ್ಲೂ ಭಯದಿಂದ ಪೂಜಿಸತೊಡಗಿದ. ಯಾವನೋ ಒಬ್ಬ ಚಾಲಾಕಿ ಜನರಿಗೆ ದಾರಿ ತಪ್ಪಿಸಲು ಹೇಳಿದ ಸಂಗತಿ ದಿಟವಾಯ್ತು. ಹೀಗಾಗಿ ಮೂರು ದಾರಿ ಕೂಡುವಲ್ಲಿ, ಕೆರೆ, ಕಟ್ಟೆ ಬಾವಿ ಹೂ ಗಿಡ ಮರ ಮುಂತಾದವುಗಳನ್ನು ಪೂಜಿಸಲು ಶುರುವಾಯಿತು. ತುಳಸಿ ಗಿಡ, ಆಲದ– ಬನ್ನಿಯ

ಮರವನ್ನು ನಾವು ಇಂದಿಗೂ ಪೂಜಿಸುತ್ತ ಬಂದಿದ್ದೇವಲ್ಲವೆ? ಪ್ರತಿ ಊರ ಪ್ರವೇಶ ದ್ವಾರದಲ್ಲಿರುವ ಬೋಟುಗಲ್ಲಿಗೆ ನಾವು ನಮಿಸುತ್ತ ಬಂದಿದ್ದೇವಲ್ಲವೆ? ಈ ದೇವರುಗಳಾದರೋ ಭರಪೂರವಾಗಿ ಹೈನು ಕೊಡುತ್ತಿರುವ ಎಮ್ಮೆಗೆ ಕಾಡುತ್ತದೆ, ಮಕ್ಕಳನ್ನು ಪೀಡಿಸುತ್ತವೆ, ಬಸುರಿ, ಬಾಣಂತಿಯರಿಗೆ ಕಾಟ ಕೊಡುತ್ತವೆ. ತೊಂದರೆಯನ್ನು ಮಾಡುವವು, ವಿನಾಕಾರಣ ಕಾಟ ಕೊಡುವವರು, ಜನರನ್ನು ತಿಕ್ಕಿ ಮುಕ್ಕಿ ಕಾಡುವವು- ಪೀಡಿಸುವವರು ಹೇಗೆ ದೇವರಾಗುತ್ತವೋ? ಎಂಬ ಪ್ರಶ್ನೆ ಬಸವಣ್ಣವರಿಗೆ ಕಾಡಿದ್ದರಿಂದಲೆ ಇವುಗಳ ನಂಬಿಕೆಯನ್ನು ಸಾರಾಸಗಟಾಗಿ ತಿರಸ್ಕರಿಸಿ ಕೂಡಲಸಂಗಮ ಎನ್ನ ಸಾಕು ಎಲ್ಲವೂ ಆ ದೇವರಿಗೆ ಸಮರ್ಪಣೆಗೊಳ್ಳುತ್ತವೆ ಎಂದು ಹೇಳುತ್ತಾರೆ.

**ಬಣ್ಣವುಂಡ ಚಿನ್ನದಂತೆ,ಬೆಣ್ಣೆ ಉಂಡ ಘೃತದಂತೆ**
**ಪ(ಸ್ವ)ರವುಂಡ ಶಬ್ಧದಂತೆ, ಪರಿಮಳವುಳ್ಳ ಪುಷ್ಪದಂತೆ**
**ಗುಹೇಶ್ವರಲಿಂಗದಲ್ಲಿ ಹೊರೆಯಿಲ್ಲದಿರ್ಪ ಸಂಗನ ಬಸವಣ್ಣನ**
**ಭಕ್ತಿಯಾಚಾರದ ಮಹಾತ್ಮೆಯೆಂತು ಪೇಳಾ ಮಡಿವಾಳ ಮಚಯ್ಯಾ**

ಬಸವಣ್ಣನವರ ಭಕ್ತಿ ಹೇಗೆ ಭಿನ್ನ ಎಂಬುದನ್ನು ಅಲ್ಲಮ ಇಲ್ಲಿ ಬಿಡಿ ಬಿಡಿಯಾಗಿ ತಿಳಿಸಿದ್ದಾರೆ. ಚಿನ್ನದ ಬಣ್ಣವನ್ನು ಒಂದರಿಂದ ಒಂದು ಬೇರ್ಪಡಿಸಲಾಗದು. ತುಪ್ಪದಿಂದ ಬೆಣ್ಣೆಯನ್ನು ಮತ್ತೆ ಪ್ರತ್ಯೇಕಿಸಲಾಗದು. ಸ್ವರದಲ್ಲಿಯೇ ಶಬ್ಧವಿದೆ. ಶಬ್ಧದಲ್ಲಿಯೇ ಸ್ವರವಿದೆ. ಒಂದರಿಂದ ಒಂದನ್ನು ಬಿಡಿಸಿ ನೋಡಲಾಗದು. ಪುಷ್ಪದಲ್ಲಿ ಪರಿಮಳ ಬೆಸೆದುಕೊಂಡಂತೆ ಬಸವಣ್ಣ ಭಕ್ತಿಯಲ್ಲಿ ಕೂಡಿಕೊಂಡಿದ್ದಾರೆ. ಅದಲ್ಲದೆ ಬಸವಣ್ಣನ ಆ ಭಕ್ತಿಯೂ ಸಹ ಹೊರೆಯಿಲ್ಲದ ಭಕ್ತಿ. ಯಾರಿಗೂ ಕಾಡದ ಪೀಡಿಸದ ಭಕ್ತಿ. ಬಣ್ಣವುಂಡಿರುವ ಚಿನ್ನದಂತೆ, ಬೆಣ್ಣೆಯನ್ನು ಉಂಡಿರುವ ಘೃತದಂತೆ, ಸ್ವರವುಂಡ ಶಬ್ಧದಂತೆ, ಪರಿಮಳವುಂಡ ಪುಷ್ಪದಂತೆ ಬಸವಣ್ಣನವರು ಗುಹೇಶ್ವರ ಲಿಂಗದಲ್ಲಿ ಬೆರೆತು ಹೋಗಿದ್ದಾರೆ. ಇವು ಒಂದನ್ನೊಂದು ವಿಭಜಿಸಲು ಬಾರದವು. ಒಂದು ಮತ್ತೊಂದರಲ್ಲಿ ಕೂಡಿ ಸಂಗಮವಾಗಿವೆ ಈ ಮಹಾತ್ಮೆಯನ್ನು ಮಡಿವಾಳ ಮಾಚಯ್ಯ ನೀನಾದರೂ ಹೇಳಾ ಎಂದು ಅಲ್ಲಮ ಅಲವತ್ತುಕೊಳ್ಳುತ್ತಾರೆ. ಬಸವಣ್ಣನವರ ಭಕ್ತಿ ಕೊಟ್ಟಣದ ಮನೆಯಂತೆ. ಸಮಾಜದೊಂದಿಗೆ ತಾನಿಲ್ಲದಂತೆ ಕರಗಿ ಐಕ್ಯವಾಗುವುದು ಎನ್ನುತ್ತಾರೆ ಅಕ್ಕಮಹಾದೇವಿ ತಾಯಿ. ಜ್ಞಾನದ ಸಂಬಂಧಕ್ಕೆ ಬಸವಣ್ಣನವರ ವಿಶಿಷ್ಟವಾದ ಭಕ್ತಿಯೆ ಕಾರಣವೆಂದು ಸೊನ್ನಲಗಿಯ ಸಿದ್ಧರಾಮ ಹುಲುಹುತ್ತಾರೆ.

**ಭಕ್ತಿಗೆ ಅನುಭಾವವೆ ಬೀಜ ಕಾಣಿರೆ,**
**ಭಕ್ತಿಗೆ ಅನುಭಾವವೆ ಆಚಾರ ಕಾಣಿರೆ.**
**ಅನುಭಾವವಿಲ್ಲದನ ಭಕ್ತಿ ಎಳತಟಗೊಳಿಸಿತ್ತು**
**ಅನುಭಾವವ ಮಾಡುವಲ್ಲಿ ವಿನಯದಿಂದ ಕೇಳದಿದ್ದಡೆ**
**ಕೂಡಲ ಚೆನ್ನಸಂಗಮದೇವರು ಅಘೋರ ನರಕದಲ್ಲಿಕ್ಕುವ**

ಬಸವಣ್ಣನವರ ಭಕ್ತಿ ಬರಬರಾ ಭಕ್ತಿಯಾಗಿರಲಿಲ್ಲ. ಮೊದಲ ದಿನ ಹಣೆ ಮುಟ್ಟಿ ಮರುದಿನಾ ಕೈ ಮುಟ್ಟಿ ಮೂರೆಂಬ ದಿನಕೆ ತೂಕಡಿಕೆ ಕಾಣಿರಣ್ಣ ಎಂಬ ನಾಟಕೀಯ ಭಕ್ತಿಯಾಗಿರಲಿಲ್ಲ. ಅವರ ಭಕ್ತಿಗೆ ಮೂಲ ಅವರ ಅನುಭಾವ. ಅನುಭಾವವೆಂಬುದು ಭಾವ ಸಂಪತ್ತು. ಅದನ್ನು ಅನುಭವದ ಉತ್ತುಂಗ ಸ್ಥಿತಿಯಲ್ಲಿ ಕಂಡುಕೊಳ್ಳುವುದು. ಅನುಭವಿಸುವುದು. ಆ ಆನಂದವನ್ನು ವರ್ಣಿಸಲಾಗದು. ಅನುಭವವನ್ನು ಹೇಳಬಹುದು. ಅನುಭಾವವನ್ನು



ಕೇವಲ ಅನುಭವಿಸಬೇಕಷ್ಟೆ.

**ಭಕ್ತಿಯೆಂಬುದ ಮಾಡಬಾರದು**
**ಕರಗಸದಂತೆ ಹೋಗುತ್ತ ಕೊರೆದು**
**ಬರುತ್ತ ಕೊಯ್ವದು**
**ಘಟಸರ್ಪನಲ್ಲಿ ಕೈದುಡುಕಿದಡೆ ಹಿಡಿವುದ ಮಾಬುದೆ**
**ಕೂಡಲಸಂಗಮದೇವಾ**

ಭಕ್ತಿ ಕೇವಲ ಆಚರಣೆ ಅಲ್ಲ. ಅದನ್ನು ಮಾಡಬೇಕಾದರೆ ಎಂಟೆದೆ ಬೇಕು. ತನ್ನನ್ನು ತಾನು ಸಮಾಜಕ್ಕೆ ಅರ್ಪಿಸಿಕೊಂಡಿರಬೇಕು. ಸಮಾಜವೇ ದೇವರೆಂದು ಬಗೆದಿರಬೇಕು. ಸಮಾಜದೊಳಗಿನ ಪ್ರತಿ ಜೀವಿಗೂ ಲೇಸಾಗಲಿ ಎಂಬ ಹಂಬಲ ಇಟ್ಟುಕೊಂಡಿರಬೇಕು. ಹೆಣ್ಣು ಗಂಡು ಭಿನ್ನಭೇದ ಸಲ್ಲದು. ಶ್ರೀಮಂತ ಬಡವ ತರತಮ ಇಲ್ಲ. ಯಾವುದೆ ಕೆಲಸವನ್ನು ಕಾಯಕವನ್ನಾಗಿ ಮಾಡಿಕೊಳ್ಳಬೇಕು. ನನ್ನಷ್ಟಕ್ಕೆ ಮಾಡುವುದು ಕೆಲಸವಾದರೆ, ನನ್ನೊಂದಿಗೆ ಸಮಾಜವೂ ಎಂದು ಮಾಡುವುದು ಕಾಯಕವಾಗುತ್ತದೆ. ಕಾಯಕದಿಂದ ಪ್ರತಿಫಲವನ್ನು ದಾಸೋಹವನ್ನು ಮಾಡಿ ಬಯಲಲ್ಲಿ ಬಯಲಾಗಬೇಕು. ಈ ಕ್ರಿಯೆಗೆ ಭಕ್ತಿಯೆಂದು ಬಸವಣ್ಣನವರು ಹೇಳಿದ್ದಾರೆ.

ಇಂಥ ಭಕ್ತಿ ಗರಗಸದಂತೆ ಹೋಗುತ್ತ ಬರುತ್ತ ಕೊಯ್ಯುತ್ತದೆ. ನಾನೆಂಬ ಭಾವ ಸವೆ ಸವೆದು ನಾವೆಂಬ ಭಾವಕ್ಕೆ ಈಡಾಗಬೇಕು. ಭಕ್ತಿಯೆಂಬುದು ತೋರುಂಬ ಲಾಭವಲ್ಲದ್ದರಿಂದ ಅದು ಘಟಸರ್ಪನ ಎಡೆಯಲ್ಲಿದ್ದಂತೆ ಜಾಗರೂಕವಾಗಿ ನಡೆದುಕೊಳ್ಳಬೇಕು. ಕಾಣಿಯ ಸೋಲ, ಅರ್ಧ ಗಾಣಿಯ ಗೆಲ್ಲ ಎಂಬ ಪ್ರಜ್ಞಾಭಾವ ಇರಬೇಕು. ನೋವು ಬರಲಿ, ನಲಿವು ಬರಲಿ, ಸುಖ ಬರಲಿ ದುಃಖ ಬರಲಿ, ಮಾಮವು ಬರಲಿ, ಕ್ಷೇಮವು ಬರಲಿ, ಹಾನಿಯಾಗಲಿ ವೃದ್ಧಿಯಾಗಲಿ, ಮಾನವಾಗಲಿ ಅಪಮಾನ ಬರಲಿ ಎಲ್ಲವನ್ನೂ ಆ ಸೊಮ್ಮಿಗೆ ಸಮರ್ಪಿಸಿ ಬದುಕುವುದು ಭಕ್ತಿ.

ಜ್ಞಾನದ ನಿಧಿ ಅಲ್ಲಮಪ್ರಭು, ವೈರಾಗ್ಯ ನಿಧಿ ಅಕ್ಕಮಹಾದೇವಿ, ನಿಜ ಶರಣ ಅಂಬಿಗರ ಚೌಡಯ್ಯ, ಮೋಳಿಗೆಯ ಮಾರಯ್ಯ, ಶರಣೆ ಸತ್ಯಕ್ಕ, ಸೂಳೆ ಸಂಕವ್ವೆ, ಮಡಿವಾಳ ಮಾಚಿದೇವ, ಬೊಂತಾದೇವಿ, ಕುಂಬಾರ ಗುಂಡಯ್ಯ ಹೀಗೆ ಹಲವು ಬಗೆಯ ವಿಚಾರಗಳ- ವಿಭಿನ್ನ ನೋಟಗಳ ವ್ಯಕ್ತಿಗಳನ್ನು ತನ್ನ ಭಕ್ತಿಯ ಸೆರೆಯಲ್ಲಿ ಬಂಧಿಸಿಟ್ಟ ಬಸವಣ್ಣವರ ಭಕ್ತಿಯಲ್ಲಿ ತಾಯಿಯ ಪ್ರೇಮ-ವಾತ್ಸಲ್ಯವಿದೆ. ಅಂತಃಕರಣವಿದೆ. ಎಲ್ಲವನ್ನೂ ಸಮಾಜಕ್ಕೆ ತುರ ತುರನೆ ತೂರಿಬಿಡುವ ಉಮೇದು ಇದೆ. ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ವಿನೀತ ಭಾವವಿದೆ. ಚೆನ್ನಯ್ಯ ಮನೆಯಲ್ಲೂ ಬೇಡಿದೆ, ಕಕ್ಕಯ್ಯನ ಮನೆಯಲ್ಲೂ ಬೇಡಿದೆ ಎನ್ನ ಭಕ್ತಿ ಪಾತ್ರೆ ತುಂಬಿತ್ತು ಎಂಬ ಬಿಚ್ಚು ಮನಸ್ಸಿನ ಅಭಿವ್ಯಕ್ತಿ ಇದೆ.

ಬಸವಣ್ಣನವರು ಬರುವುದಕಿಂತ ಪೂರ್ವದಲ್ಲಿ ಭಕ್ತಿಗೆ ಬೇರೆಯದೆ ಆದ ಅರ್ಥವಿತ್ತು. ಆಚರಣೆಗಳಿದ್ದವು. ಆದರೆ ಬಸವಣ್ಣವರು ಬಂದ ಮೇಲೆ ಭಕ್ತಿಗೆ ವಿಶೇಷವಾದ ಮೆರಗು ಬಂತು. ಭಕ್ತಿ ಕೇವಲ ಮೌಢ್ಯದಿಂದ ಕೂಡಿರಲಿಲ್ಲ. ಭಕ್ತಿಯಲ್ಲಿ ವಿವೇಕ ವಿಚಾರ ಅಂತಃಕರಣ ಎಲ್ಲರೊಂದಿಗೆ ಕರಗಿ ಇಲ್ಲವಾಗುವ ತಹ ತಹ ಇತ್ತು. ಆದ್ದರಿಂದಲೆ ಸಿದ್ದರಾಮಣ್ಣನವರು

●

ಬಸವಮಾರ್ಗ ಪ್ರತಿಷ್ಠಾನ ಸತ್ಯಂಪೇಟೆ, ಬಸವ ಬೆಳಗು- ಬುದ್ಧ ವಿಹಾರ ಹತ್ತಿರ ಶಹಾಪುರ -೫೮೫ ೨೨೩
ಯಾದಗಿರಿ : ಜಿಲ್ಲೆ ೯೦೦೮೮೦೨೪೫೬

# ಶರಣ ಕ್ರಾಂತಿ - ನನ್ನ ಪ್ರತಿಕ್ರಿಯೆ

ಡಾ. ಲೀಲಾದೇವಿ ಆರ್. ಪ್ರಸಾದ್

**ಡಾ. ಲೀಲಾದೇವಿ ಆರ್. ಪ್ರಸಾದ್ ಅವರು ನಾಡಿನ ಹಿರಿಯ ರಾಜಕಾರಣಿಗಳು ಮತ್ತು ಲೇಖಕಿ. ಶಾಸಕರಾಗಿ, ಸಚಿವರಾಗಿ ಮತ್ತು ರಾಜ್ಯಸಭಾ ಸದಸ್ಯರಾಗಿ ಇವರು ಸೇವೆ ಸಲ್ಲಿಸಿದ್ದಾರೆ. ವಚನ ಸಾಹಿತ್ಯದೊಂದಿಗಿನ ಅನುಸಂಧಾನ ಮತ್ತು ರಾಜಕಾರಣವನ್ನು ಒಟ್ಟೊಟ್ಟಿಗೇ ನಡೆಸಿದ ಹಿರಿಮೆ ಇವರದು. ಬಾಲ್ಯದಿಂದಲೇ ಶರಣ ಚಳುವಳಿಯಿಂದ ದಟ್ಟವಾಗಿ ಪ್ರಭಾವಿತರಾದವರು. ಉಡುತಡಿಯಲ್ಲಿ ಅಕ್ಕಮಹಾದೇವಿ ಕೇಂದ್ರವನ್ನು ಸ್ಥಾಪಿಸಿ ಅದನ್ನು ಅರ್ಥಪೂರ್ಣವಾಗಿ ಮುನ್ನಡೆಸುತ್ತಿರುವವರು ಇವರು. ಅನೇಕ ಕೃತಿಗಳನ್ನು ಇವರು ರಚಿಸಿದ್ದಾರೆ.**

**೧. ಶರಣ ಚಳುವಳಿಯ ಮೂಲ ಆಶಯಗಳು ನಿಮ್ಮ ದೃಷ್ಟಿಯಲ್ಲಿ?**

**ಉತ್ತರ:** ಚಳುವಳಿಯ ಶಬ್ದಕ್ಕೆ ಅನೇಕ ವಿವರಗಳನ್ನು ಕೊಡಬಹುದು. ಇಂದಿನ ಚಳುವಳಿಗಳು ಅಂದಿನ ಶರಣರ ಚಳುವಳಿಗೂ ಅಜಗಜಾಂತರ ವ್ಯತ್ಯಾಸವೆಂದು ಹೇಳಬಹುದು.

ಚಳುವಳಿ ಒಬ್ಬ ವ್ಯಕ್ತಿಯ ಸ್ವತ್ತಲ್ಲ. ಚಳುವಳಿ ಸಂಘಟನೆಯ ಶಕ್ತಿ ಆಗಬೇಕು. ಚಳುವಳಿ ಸಮಾಜದಲ್ಲಿ ಸುಧಾರಣೆಗಾಗಿ ಬದಲಾವಣೆಗಾಗಿ ಒಗ್ಗಟ್ಟಿನಿಂದ ಚಳುವಳಿ ಮಾಡಿದಾಗ ಮಾತ್ರ ಶಕ್ತಿ ಬರುತ್ತದೆ.

ಶರಣರು ವಚನಗಳ ಮುಖಾಂತರ ಚಳುವಳಿಯನ್ನು ಪ್ರಾರಂಭಮಾಡಿ ಅಚ್ಚಕನ್ನಡದ ವಚನಗಳನ್ನು ಮನೆ-ಮನೆಗೂ ಮನ, ಮನಕ್ಕೂ ಮುಟ್ಟುವಂತೆ ವಚನಗಳನ್ನು ಚಳುವಳಿಗಳ ರೂಪದಲ್ಲಿ ಬಿತ್ತರಿಸಿದರು. ಚಳುವಳಿಗೆ ಇನ್ನೊಂದು ಅರ್ಥ ಸಾಮೂಹಿಕವಾದ ತಿಳುವಳಿಕೆ ಅರ್ಥಪೂರ್ಣವಾಗಿ ಅರ್ಥೈಸುವ ವಚನ ಚಳುವಳಿಯನ್ನು ಶರಣರು ಪ್ರಾರಂಭಿಸಿದರು.

ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದು ಕಾಲಾಂತರದಲ್ಲಿ ಚರಿತ್ರೆ ಪುಟ ಸೇರಿದ ವಚನ ಸಾಹಿತ್ಯ ಇಂದು ವಿಪುಲವಾದ ಪ್ರಮಾಣದಲ್ಲಿ ಲಭ್ಯವಿದೆ. ಈ ವಚನ ವಾಙ್ಮಯ ನಮ್ಮ ಪರಂಪರೆಯ ಅಪೂರ್ವ ಸಾಂಸ್ಕೃತಿಕ ಆಸ್ತಿಯಾಗಿದೆ. ಜೀವನದ ಪರ ಧ್ವನಿಗಳು ಇಲ್ಲಿ ಗಟ್ಟಿಯಾಗಿ ಕೇಳಿಬರುತ್ತವೆ. ಸಮಾಜದ ಎಲ್ಲ ವರ್ಗಗಳ ಪುರುಷರು ಹಾಗೂ ಮಹಿಳೆಯರ ಸಂಕೀರ್ಣ ಧ್ವನಿಗಳು ವಚನ ಸಾಹಿತ್ಯದಲ್ಲಿ ತುಂಬಿ ಬಂದಿವೆ.

ವಚನವೆನ್ನುವುದು ಒಂದು ಪವಿತ್ರವಾದ ಶಬ್ದ ವಚನಕ್ಕೆ ಇರುವಷ್ಟು ಶಕ್ತಿ ಬೇರೊಂದಕ್ಕೆ ಇಲ್ಲ. ವೇದ ಉಪನಿಷತ್ತುಗಳು, ಗೀತೆಗಳು ಎಲ್ಲವೂ ಕನ್ನಡಿಗರಿಗೆ ಅರ್ಥವಾಗದೆ ದೇವ ಭಾಷೆಯಲ್ಲಿ ಪ್ರಸಿದ್ಧಿ ಪಡೆದವು. ಕರ್ನಾಟಕದ ಅಚ್ಚ ಕನ್ನಡಿಗರಿಗೆ ಇವು ಕಬ್ಬಿಣದ ಕಡಲೆಯಾಗಿ



ಕಂಡವು. ೧೨ನೇ ಶತಮಾನದ ಕನ್ನಡ ನಾಡಿನ ವಚನಕಾರರೆಲ್ಲರೂ ಕನ್ನಡ ತಾಯಿಯ ಮಕ್ಕಳಾಗಿ ತಮ್ಮ ಮುದ್ದಿನ ಕನ್ನಡ ಪೀಳಿಗೆಗೆ ಕನ್ನಡದಲ್ಲೆ ವಚನಗಳನ್ನು ರಚಿಸಲು ಪ್ರಾರಂಭಿಸಿದರು. ಶರಣ ಶರಣೆಯರು ರಚಿಸಿದ ವಚನಗಳ ಸಂಖ್ಯೆ ಅಗಣಿತ, ೧೨ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಲಭ್ಯವಾಗಿ ಸಿಕ್ಕಿರುವ ಸುಮಾರು ೨೧ ಸಾವಿರಗಳಿಗಿಂತಲೂ ಹೆಚ್ಚಾಗಿ ವಚನಗಳು ಕಂಡುಬರುತ್ತವೆ.

ವಚನ ಪಿತಾಮಹ ಡಾ॥ ಫ.ಗು. ಹಳಕಟ್ಟಿಯವರ ಪರಿಶ್ರಮ ಅವರ "ವಚನ ಶಾಸ್ತ್ರ ಸಾರ" ಒಂದು ಅಮೋಘವಾದ ಕೃತಿಯಾಗಿ ಹೊರಬಂದಿದೆ. ವಚನ ಸಾಹಿತ್ಯ ಸಿದ್ಧಾಂತ ಅಚ್ಚ ಕನ್ನಡದ ಸಾಹಿತ್ಯ ಎಂದು ಕರೆಯಬಹುದು. ಕನ್ನಡಿಗರಿಗೆ ವಚನಗಳನ್ನು ಬಿಟ್ಟರೆ, ಕನ್ನಡ ಸಾಹಿತ್ಯವೆನ್ನುವುದು ಎಲ್ಲಿದೆ? ವಚನಕಾರರಿಗೆ ಮುಖ್ಯವಾಗಿರುವುದು ಸುಂದರ ಸಾಹಿತ್ಯದ ದೃಷ್ಟಿ. ಹಿಂದೂಗಳಿಗೆ ಭಗವದ್ಗೀತೆ, ಕ್ರಿಶ್ಚಿಯನ್‌ರಿಗೆ ಬೈಬಲ್, ಮುಸ್ಲಿಂರಿಗೆ ಖುರಾನ್, ಸಿಖ್‌ರಿಗೆ ಗುರುಗ್ರಂಥ ಸಾಹಿಬ್ ಇವೆಲ್ಲವೂ ಧರ್ಮಗ್ರಂಥಗಳಾಗಿ ನಿಂತಿವೆ. ಆದರೆ ಕನ್ನಡ ಜನತೆಗೆ ಅದರಲ್ಲಿಯೂ ವೀರಶೈವ ಲಿಂಗಾಯತರಿಗೆ ಯಾವ ಧರ್ಮಗ್ರಂಥವಿದೆ? ವಚನ ಸಾಹಿತ್ಯದ ವಚನಗಳೆ ಧರ್ಮ ಗ್ರಂಥ ಯಾಕಾಗಬಾರದು? ಇದರ ಬಗ್ಗೆ ಎಲ್ಲ ಪಂಡಿತರು ಸೂಕ್ಷ್ಮವಾಗಿ, ಆಳವಾಗಿ ಅಧ್ಯಯನ ಮಾಡಬೇಕಾಗಿದೆ. ನಮಗೂ ಒಂದು ಧರ್ಮಗ್ರಂಥ ಬೇಡವೆ? ಇದು ಇಂದು ಎಲ್ಲರನ್ನೂ ಕಾಡುವ ಯಕ್ಷ ಪ್ರಶ್ನೆಯಾಗಿದೆ. ಕಾರಣ ೧೨ನೇ ಶತಮಾನದಲ್ಲಿ ಬಸವಾದಿ ಶರಣರಿಂದ ಅಭಿವ್ಯಕ್ತಗೊಂಡ ವಿಶ್ವಸಾಹಿತ್ಯದ ಪ್ರಕಾರದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಸಮಾಜದ ಎಲ್ಲ ವರ್ಗ ವರ್ಣಗಳ ಜಾಗತೀಕ ಚಳುವಳಿಯಾಗಿ ರೂಪಗೊಂಡಿರುವ ಈ ವಚನ ಸಾಹಿತ್ಯ ಅನುಭಾವಿ ಸಾಹಿತ್ಯವಾಗಿದೆ. ಮಾಹಿತಿ ತಂತ್ರಜ್ಞಾನ ಇಂದಿನ ಜಾಗತೀಕರಣದ ರಭಸದಲ್ಲಿ ಮಾನವೀಯ ಮೌಲ್ಯಗಳು ಮಾಯವಾಗುತ್ತಿರುವ ಸಂದರ್ಭದಲ್ಲಿ ಪುನಃ ಮನುಷ್ಯತ್ವ, ಮಾನವೀಯ ಮೌಲ್ಯಗಳನ್ನು ಅಪ್ಪಿಕೊಳ್ಳುವಂತಹ ಸುಮಧುರ ಬಾಂಧವ್ಯವನ್ನು ಬೆಸುಗೆ ಹಾಕಲು ಎಲ್ಲರ ಹೃದಯ ಕಮಲಗಳನ್ನು ಅರಳಿಸತಕ್ಕಂತಹ ಮನೋಭಾವವನ್ನು ಒಗ್ಗೂಡಿಸಲು ವಚನ ಸಾಹಿತ್ಯವೆ ಮೂಲ ಬೀಜವಾಗಿ ಚಿಗುರಬೇಕಾಗಿದೆ ಎಂದರೆ ತಪ್ಪಾಗಲಾರದು.

**೨. ಬಾಲ್ಯದಲ್ಲಿ ವಚನಗಳಿಗೆ ನೀವು ಆಕರ್ಷಿತರಾದ ಬಗ್ಗೆ ಹೇಳಿ?**

**ಉತ್ತರ:** ನಮ್ಮ ತಾಯಿ ಅನೇಕ ಅಕ್ಕಮಹಾದೇವಿಯ ಸಂಸ್ಥೆಗಳನ್ನು ಹುಟ್ಟು ಹಾಕಿ ೧೨ನೇ ಶತಮಾನದ ವಚನಕಾರರ ವಚನಗಳನ್ನು ಚಿಕ್ಕ ಮಕ್ಕಳಿಗೆ ಕಂಠಪಾಠ ಮಾಡಿಸಿ, ಹೇಳಿಸಿ ಬಹುಮಾನಗಳನ್ನು ಕೊಡುತ್ತಿದ್ದರು. ನಾವು ಎಳೆ ವಯಸ್ಸಿನಲ್ಲಿ ಬಹುಮಾನದ ಆಸೆಗಾಗಿ ವಚನಗಳನ್ನು ಕಂಠಪಾಠ ಮಾಡುತ್ತಿದ್ದೆವು. ಅಂದು ನಮಗೆ ವಚನಗಳು ಅರ್ಥವಾಗಿರಲಿಲ್ಲ. ಬಹುಮಾನವೆ ಮುಖ್ಯವಾಗಿತ್ತು.

**೩. ರಾಜಕಾರಣದ ನಿಮ್ಮ ಸುದೀರ್ಘ ಬದುಕಿನಲ್ಲಿ ಶರಣ ಚಳುವಳಿ ನಿಮಗೆ ಎದುರಾದದ್ದರ ಬಗ್ಗೆ ಹೇಳಿ?**

**ಉತ್ತರ:** ರಾಜಕಾರಣಕ್ಕೂ ಶರಣ ಚಳುವಳಿಗೂ ಅಜಗಜಾಂತರ ವ್ಯತ್ಯಾಸ. ನಾವೆಲ್ಲಾ ಮೂಲಭೂತವಾಗಿ ಶರಣ ಚಳುವಳಿಯಲ್ಲಿ ಬೆಳೆದು ಬಂದವರು. ಶರಣ ಸಾಹಿತ್ಯ, ವಚನಗಳ ಅಧ್ಯಯನ, ಶರಣ ಸಂಸ್ಕೃತಿ ಇವೆಲ್ಲವೂ ನಮ್ಮ ಮನೆತನದ ವಾತಾವರಣದಲ್ಲಿ ಹಾಸುಹೊಕ್ಕಾಗಿ ಬಂದಾಗ ರಾಜಕಾರಣದ ಗಂಧವೇ ನನಗೆ ಗೊತ್ತಿರಲಿಲ್ಲ. ಆದರೆ ನಾನು ಮದುವೆಯಾಗಿ

ಬಂದಾಗ ನಮ್ಮ ಮಾವನವರಾದ ಆಸ್ಥಾನ ವಿದ್ವಾನ ಪಂಡಿತರತ್ನ ಪದ್ಮಶ್ರೀ ಡಾ. ಬಿ. ಶಿವಮೂರ್ತಿ ಶಾಸ್ತ್ರಿಗಳ ಮನೆಗೆ ಪಾದಾರ್ಪಣೆ ಮಾಡಿದಾಗ ಅವರ ಸ್ವಾತಂತ್ರ್ಯ ಕರ್ನಾಟಕ ಪ್ರೆಸ್‌ನಲ್ಲಿ 'ಶರಣ ಸಾಹಿತ್ಯ' ಎಂಬ ಮಾಸಪತ್ರಿಕೆ ಹೊರಬರುತ್ತಿತ್ತು. ಆ ಮಾಸಪತ್ರಿಕೆಯಲ್ಲಿ ಹೆಚ್ಚಿನ ಪುಟಗಳು ಶರಣ ಸಾಹಿತ್ಯದ ಬಗ್ಗೆ ಮಹಾಪುರುಷರ ಬಗ್ಗೆ ವಚನಕಾರರ ಬಗ್ಗೆ ಉಲ್ಲೇಖಿಸಿದ ಅನೇಕ ಪುಟಗಳನ್ನು ಓದುತ್ತಾ ಓದುತ್ತಾ ನನಗೂ ವಚನ ಸಾಹಿತ್ಯದ ಬಗ್ಗೆ ಓದಬೇಕು, ಅಭ್ಯಾಸಿಸಬೇಕು ಎಂಬ ಹಂಬಲ ಹುಟ್ಟುಹಾಕಿತು.

**೪. ನಿಮಗೆ ಪ್ರಿಯರಾದ ವಚನಕಾರರು, ಅವರ ಬಗ್ಗೆ ವಿವರವಾಗಿ ಹೇಳಿ?**

**ಉತ್ತರ:** ವಚನಕಾರರೆಲ್ಲರೂ ವಚನಗಳನ್ನು ಅಭ್ಯಾಸ ಮಾಡುವವರಿಗೆ ಪ್ರಿಯವಾಗಿ, ಗುರುವಾಗಿ ಕಂಡುಬರುತ್ತಾರೆ. ಶಿವಶರಣರ ವಚನಗಳಲ್ಲಿ ಅಲ್ಲಮಪ್ರಭುವಿನ ಬೆಡಗಿನ ವಚನಗಳು ನನಗೆ ಮೊದ ಮೊದಲು ಕಬ್ಬಿಣದ ಕಡಲೆಯಾಗಿ ಕಂಡುಬಂದವು. ಓದುತ್ತಾ, ಓದುತ್ತಾ ಹೋದ ಹಾಗೆ ಅಲ್ಲಮ ಪ್ರಭುವಿನ ವಚನಗಳು ಇಂದಿನ ಪರಿಸ್ಥಿತಿಗೆ ಅನುಗುಣವಾಗಿ ೧೨ನೇ ಶತಮಾನದಲ್ಲಿಯೇ ಹಲವು ವಚನಗಳನ್ನು ರಚಿಸಿರುವರು.

ಇಂದು ನಾವೆಲ್ಲಾ ಕೊರೋನಾ ಜಗತ್ತಿನಲ್ಲಿ ಜೀವಿಸುತ್ತಿದ್ದೇವೆ. ಕೊರೋನಾ ಮಹಾಮಾರಿ ಪ್ರಪಂಚವನ್ನೆ ತಲ್ಲಣಿಸುತ್ತಿದೆ. ಆದರೆ ೧೨ನೇ ಶತಮಾನದಲ್ಲಿ ಅಲ್ಲಮ ಪ್ರಭುವಿನ ಒಂದು ವಚನ ಈ ಮಹಾಮಾರಿಯ ಬಗ್ಗೆ ಬರೆದಿರುವುದನ್ನು ಕಂಡಾಗ ನಮ್ಮ ಮನಸ್ಸು ತಲ್ಲಣಿಸುತ್ತಿದೆ.

ಅಲ್ಲಮ ಪ್ರಭುವಿನ ವಚನ ಇಂತಿದೆ:

**ಕಂಡು ಕಂಡವನೆಲ್ಲವ**
**ಕೊಂಡು ಅಟ್ಟಹಾಸದಿ ಮೆರೆವ ಜನಕೆ**
**ಕಾಣದ ಜೀವಿಯು ಬಂದು ತಲ್ಲಣಿಸುವುದು**
**ಜಗವ ನೋಡಾ 'ಗುಹೇಶ್ವರ'**

ಕೊರೋನಾ ಇಂದು ಕಾಣದ ಜೀವಿಯಾಗಿ ಪ್ರಪಂಚವನ್ನು ತಲ್ಲಣಿಸುತ್ತಿದೆ. ಅಲ್ಲಮ ಪ್ರಭುವಿನ ವಚನಗಳು ಸುಲಭವಾಗಿ ಅರಗಿಸಿಕೊಳ್ಳಲಾಗುವುದಿಲ್ಲ ಇನ್ನು ತಿಳಿ ಗನ್ನಡದಲ್ಲಿ ಅರ್ಥವಾಗುವಂತಹ ವಚನಗಳನ್ನು ರಚಿಸಿದವರು ಬಸವಣ್ಣನವರು.

ಬಸವಣ್ಣನ ಅನೇಕ ವಚನಗಳಲ್ಲಿ ಎಲ್ಲ ದೇಶಕ್ಕೂ ಎಲ್ಲ ಜನಾಂಗಕ್ಕೂ ಅನ್ವಯವಾಗುವಂತೆ ಕಳಬೇಡ, ಕೊಳಬೇಡ ಎಂಬ ವಚನವು ಎಲ್ಲ ವಚನಗಳ ಸಾರವನ್ನು ಮನುಷ್ಯನ ವ್ಯಕ್ತಿತ್ವದ ವಿಕಾಸಕ್ಕೆ ಒಂದೆ ಒಂದು ವಚನದಲ್ಲಿ ತುಂಬಿದ್ದಾರೆ.

ಬೈಬಲ್‌ನ ೧೦ ಕಮಾಂಡ್ ಮಟ್ಟ ಹೇಳುವ ಸಾರವು ಈ ವಚನದಲ್ಲಿ ಕಂಡುಬರುತ್ತದೆ. ಇನ್ನು ನನಗೆ ಅತಿ ಪ್ರಿಯರಾದ ವಚನಕಾರರಲ್ಲಿ ನನ್ನ ಆರಾಧ್ಯ ದೇವತೆ ಅಕ್ಕಮಹಾದೇವಿ. ಅವಳ ಎಲ್ಲ ವಚನಗಳನ್ನು ಓದಲು ಪ್ರಯತ್ನಿಸುತ್ತಿದ್ದೇವೆ. ಅಕ್ಕಮಹಾದೇವಿ ತನ್ನ ವಚನದಲ್ಲಿ ನಿಸರ್ಗದ ಸತ್ಯವನ್ನು ಎತ್ತಿ ಹಿಡಿದಿದ್ದಾಳೆ. "ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಎಷ್ಟೊಂದು ಅರ್ಥಗರ್ಭಿತವಾಗಿದೆ. ಈ ಲೋಕದ ಚಟುವಟಿಕೆಗಳೆಲ್ಲಾ ರವಿ ಉದಯದಿಂದ ಪ್ರಾರಂಭವಾಗುತ್ತಿರುವ ಸತ್ಯವನ್ನು ಉಲ್ಲೇಖಿಸಿದ್ದಾಳೆ.

ಅವಳ ಅನೇಕ ವಚನಗಳನ್ನು ನಾನು ನಿರ್ವಚನ ಮಾಡಿದ್ದೇನೆ. ಇನ್ನು ವಚನ ನಿರ್ವಚನ ಮಾಡುವ ಕೆಲಸ ತುಂಬಾ ಇದೆ ಎಂದರೆ ತಪ್ಪಾಗಲಾರದು.



**೫. ಉಡುತಡಿಯಲ್ಲಿ ನೀವು ಆರಂಭಿಸಿದ ಅಕ್ಕಮಹಾದೇವಿ ಕೇಂದ್ರದ ಆಶಯಗಳು:**

**ಉತ್ತರ:** ನಾನು ಉಡುತಡಿಗೆ ಬಂದು ಅಕ್ಕನ ಸೇವೆ ಮಾಡುತ್ತಿರುವುದು ಕರ್ನಾಟಕದ ಬಹು ಜನರಿಗೆ ಆಶ್ಚರ್ಯ ಹಾಗೂ ಸೋಜಿಗದ ಸಂಗತಿಯಾಗಿದೆ. ಕರ್ನಾಟಕದ ಮಂತ್ರಿ, ಆದವರು ಪ್ರತಿವಾರ ಸರಕಾರಿ ಬಸ್ಸಿನಲ್ಲಿ ಬಂದು ಇಲ್ಲಿ ಸೇವೆಯ ಹೆಸರಿನಲ್ಲಿ ಕೋಟ್ಯಾಂತರ ರೂಪಾಯಿ ಲಾಭ ಮಾಡಿಕೊಳ್ಳಲು ಬರುತ್ತಿರಬಹುದು. ಇಲ್ಲದೆ ಇದ್ದಲ್ಲಿ ಮಂತ್ರಿ ಆದವರು ಬೆಂಗಳೂರು ಬಿಟ್ಟು ಇಲ್ಲಿಗೇಕೆ ಬರುವರು? ಇಲ್ಲಿದೆ ರಾಜಕೀಯ ಲಾಭ ಅಥವಾ ಇಲ್ಲಿಯೇ ಚುನಾವಣೆಗೆ ನಿಲ್ಲಲು ಪೀಠಿಕೆ ಹಾಕುತ್ತಿರಬೇಕು? ಇಂತಹ ಪ್ರಶ್ನೆಗಳು ಅನೇಕ ಜನರ ಮನಸ್ಸಿನಲ್ಲಿ ಸುಳಿದಾಡುತ್ತಿರಬೇಕು. ಇದು ಇಂದಿನ ಸಾರ್ವಜನಿಕ ಸಂಸ್ಥೆಯಲ್ಲಿ ಕೆಲಸ ಮಾಡುವವರ ಬಗ್ಗೆ ಸಾಮಾನ್ಯ ಜನರ ಮನಸ್ಸಿನಲ್ಲಿ ಬರುವ ಪ್ರಶ್ನೆಯೇ ಆಗಿರಬಹುದು.

ನಾನು ಉಡುತಡಿಗೆ ರಾಜಕೀಯ ಮಾಡುವುದಕ್ಕೆ ಹೋಗಿಲ್ಲ. ನನ್ನ ಜೀವನದಲ್ಲಿ ಅಕ್ಕನ ಹೆಜ್ಜೆಯ ಗುರುತುಗಳು ಹಾಗೂ ಅಕ್ಕ ನನ್ನ ಬದುಕಿನಲ್ಲಿ ಹೇಗೆ ಪ್ರವೇಶ ಮಾಡಿದಳು ಹೇಳಲೇಬೇಕಲ್ಲವೆ? ಕಾರಣ ಓದುವವರಿಗೆ ಲೀಲಾದೇವಿ ಪ್ರಸಾದ್‌ರಿಗೂ ಅಕ್ಕಮಹಾದೇವಿಗೂ, ಉಡುತಡಿಗೂ ಏನು ಸಂಬಂಧ? ಎಂಬ ಪ್ರಶ್ನೆ ಅನೇಕರ ಪ್ರಶ್ನೆಯಾಗಬಹುದಲ್ಲವೆ.

ಶರಣರ ವಚನದಂತೆ

**"ಬೆಟ್ಟದ ಮೇಲಿನ ನೆಲ್ಲಿಕಾಯಿ ಸಮುದ್ರದ ಮೇಲಿನ ಉಪ್ಪು**
**ಎತ್ತಲಿಂದ ಎತ್ತ ಸಂಬಂಧವಯ್ಯಾ?"** ಎಂದು ಹೇಳಬಹುದೆ?

ಹೌದು, ಒಂದೊಂದು ಸಲ ನಮ್ಮ ಬದುಕಿನಲ್ಲಿ ನಮಗೆ ಅರಿವಿಲ್ಲದ ಕೆಲವು ಸಂಬಂಧಗಳು ಕೂಡಿ ಬರುತ್ತವೆ.

ಅಂದಿನ ಕಾಲದಲ್ಲಿ ನಮ್ಮ ತಾಯಿ. ದಿವಂಗತ ಗುರುದೇವಿ. ಹಿರೇಮಠರವರು. ಮಹಿಳೆಯರ ಸಂಘಟನೆಗಾಗಿ ಅಕ್ಕಮಹಾದೇವಿ ಸಂಸ್ಥೆಗಳನ್ನು ಹುಟ್ಟು ಹಾಕಿ, ಅಕ್ಕಮಹಾದೇವಿ ಸಂಸ್ಥೆಯ ಮುಖಾಂತರ ಮಹಿಳೆಯರಿಗೆ ಧಾರ್ಮಿಕ, ಸಾಮಾಜಿಕ ಇತ್ಯಾದಿ ಆಯಾಮಗಳನ್ನು ಪ್ರಚಾರಪಡಿಸಲು ಶ್ರಮಿಸಿದವರು. ನಮ್ಮ ಮನೆಯ ವಾತಾವರಣವೆ ನನಗೂ ಕೂಡಾ ಅಕ್ಕನ ಬಗ್ಗೆ ತಿಳಿದುಕೊಳ್ಳುವ ಆಸೆ ಚಿಗುರೊಡೆಯತೊಡಗಿತು. ನಾನು ಹತ್ತು ವರುಷದ ಮಗು ಇರುವಾಗಲೆ ಅಕ್ಕನ ಜಯಂತಿಯಂದು ಹುಬ್ಬಳ್ಳಿ ಮೂರು ಸಾವಿರ ಮಠದಲ್ಲಿ ಅಕ್ಕನ ಜಯಂತಿಯ ಸಮಾರಂಭದಲ್ಲಿ ನಮ್ಮ ತಾಯಿ ಅಧ್ಯಕ್ಷತೆಯನ್ನು ವಹಿಸಬೇಕಾಗಿತ್ತು. ಆದರೆ ಅನಿವಾರ್ಯದಿಂದ ನಮ್ಮ ತಾಯಿ ಆ ಸಭೆಗೆ ಹೋಗಲಾಗಲಿಲ್ಲ. ಅವರ ಪರವಾಗಿ ನಾನು ಹಠ ಮಾಡಿ ಅಂದು ಅಕ್ಕನ ಜಯಂತಿಯ ಸಭೆಯಲ್ಲಿ ನನ್ನ ತೊದಲು ನುಡಿಯಿಂದ ಅಕ್ಕನ ಕುರಿತು ನನ್ನ ಚೊಚ್ಚಲ ಭಾಷೆಯನ್ನು ಪ್ರಾರಂಭಿಸಿದೆನು. ಅಂದಿನಿಂದ ಇಲ್ಲಿಯವರೆಗೆ ಅಕ್ಕನ ಚರಿತ್ರೆ ಅವಳ ಹೆಜ್ಜೆ ಗುರುತುಗಳು ನನ್ನ ನರನಾಡಿಯಲ್ಲಿ ತುಂಬಿಕೊಂಡು ಬಂದಿವೆ. ತದನಂತರ ಅನೇಕ ಅಕ್ಕನ ಸಮ್ಮೇಳನಗಳು ಅಕ್ಕನ ಚರ್ಚಾಕೂಟಾ. ಅಕ್ಕನ ಪುರಾಣ, ಅಕ್ಕನ ಚರಿತ್ರೆ, ಅಕ್ಕನ ಹುಟ್ಟೂರು ಹೀಗೆ ನಾನಾ ರೀತಿಯಲ್ಲಿ ಅವಳನ್ನು ಅರ್ಥೈಸಲು ಪ್ರಯತ್ನಿಸತೊಡಗಿದೆ. ಉಡುತಡಿ ಅಕ್ಕನ ಹುಟ್ಟೂರು ಎಂದು ಕನ್ನಡದ ಮೇರು ಕವಿಗಳಾದ ರಾಘವಾಂಕ, ಹರಿಹರ, ಚಾಮರಸ ಇವರೆಲ್ಲರು ರಚಿಸಿದ ಅಕ್ಕಮಹಾದೇವಿಯ ಸಾಹಿತ್ಯವನ್ನು ಅವಲೋಕಿಸಿದಾಗ ಉಡುತಡಿ ಎಂಬ ಅಕ್ಕನ ಹುಟ್ಟೂರು ಯಾರಿಗೂ ಸಿಕ್ಕಿಲ್ಲ ಎಂದು ನನ್ನ ಭಾವನೆ. ಆ ನಿಟ್ಟಿನಲ್ಲಿ ಅಕ್ಕನ ಹುಡುಕಾಟದಲ್ಲಿ ಎಂಬ ಒಂದು ಅನುಭವ ಕಥನವನ್ನು ಕೂಡ ರಚಿಸಿ ಪ್ರಕಟಿಸಿರುವೆನು.

ಕೊನೆಗೆ ಕೇವಲ ಉಡುತಡಿ. ಸಾಹಿತ್ಯ ರಚನೆಯಲ್ಲಿ ಮಾತ್ರ ಉಳಿಯಬಾರದೆಂದು ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕು, ಶಿರಾಳಕೊಪ್ಪದ ಉಡುಗಣಿ–ತಡುಗಣಿ ಎಂಬ ಚಿಕ್ಕ ಹಳ್ಳಿಯಲ್ಲಿ ಕೌಶಿಕ ಮಹಾರಾಜನ ಹಾಳು ಕೋಟೆಯೊಂದು ಇಂದು ಅಕ್ಕನ ಕುರುಹು ಆಗಿ ನಿಂತಿವೆ. ಆ ಕೋಟೆಯ ಒಳಭಾಗದಲ್ಲಿ ಅಕ್ಕಮಹಾದೇವಿಯ ದೇವಸ್ಥಾನ ಹಾಗೂ ಸುಂದರವಾದ ತೋಟ. ನಿರ್ಮಾಣ ಮಾಡಿ ಅದೊಂದು ಪ್ರವಾಸಿಗರಿಗಾಗಿ ಆಕರ್ಷಣೆಯ ಸ್ಥಳವಾಗಲು ನಿರಂತರ ಪ್ರಯತ್ನಿಸುತ್ತಿದ್ದೇನೆ.

**೬. ರಾಜಕೀಯವನ್ನು ವಚನಕಾರರು ಎದುರಿಸಿದ ಬಗೆಗೂ ಸಧ್ಯದ ರಾಜಕಾರಣದ ಸಂದರ್ಭವನ್ನೂ ಹೇಗೆ ವ್ಯಾಖ್ಯಾನಿಸುತ್ತೀರಿ?**

**ಉತ್ತರ:** ವಿಶ್ವಗುರು ಬಸವಣ್ಣ ಕೇವಲ ಧರ್ಮಗುರುವಾಗಿರದೆ ಅವರೊಬ್ಬ ರಾಜಕೀಯ ಧುರೀಣರಾಗಿದ್ದನ್ನು ಮರೆಯಲಾಗುವುದಿಲ್ಲ. ಬಿಜ್ಜಳನ ಆಸ್ಥಾನದಲ್ಲಿ ಮುಖ್ಯಮಂತ್ರಿಯಾಗಿ ಸೇವೆ ಸಲ್ಲಿಸಿದ ಕೀರ್ತಿ ಬಸವಣ್ಣನವರದಾಗಿತ್ತು. ಸಧ್ಯದ ರಾಜಕಾರಣದ ಸಂಬಂಧಕ್ಕೂ ಶರಣರ ಕಾಲದ ರಾಜಕಾರಣಕ್ಕೂ ಅಜಗಜಾಂತರ ವ್ಯತ್ಯಾಸ. ವಚನಕಾರರು ಎದುರಿಸಿರುವುದು ರಾಜಕೀಯವೆಂದರೆ ಧರ್ಮಯುತವಾದ ರಾಜಕಾರಣ ಧರ್ಮದ ತಳಹದಿಯ ಮೇಲೆ, ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು ಎಂಬ ಸಮಾಜಮುಖಿ ಸಿದ್ಧಾಂತದ ಮೇಲೆ ಸತ್ಯ ಶುದ್ಧ ಕಾಯಕವನ್ನು ಅಳವಡಿಸಿಕೊಂಡು ರಾಜಕಾರಣ ಮಾಡಿದ ಶರಣರು. ಇಂದಿನ ರಾಜಕಾರಣಕ್ಕೂ ಭೂಮಿ ಆಕಾಶದಷ್ಟು ಅಂತರವೆಂದು ಹೇಳಬಹುದಲ್ಲವೆ?

ವಚನಕಾರರ ರಾಜಕಾರಣ ಜನಪರ ರಾಜಕಾರಣ. ಸಧ್ಯದ ರಾಜಕಾರಣ ಸ್ವಯಂ ಹಿತಕ್ಕಾಗಿ. "ನಾನು, ನನ್ನಿಂದ, ನನಗಾಗಿ" ಎಂಬುದು ಇಂದಿನ ರಾಜಕಾರಣ. ಅಂದಿನ ರಾಜಕಾರಣಕ್ಕೂ ಇಂದಿನ ರಾಜಕಾರಣದ ಅಕಾಡವನ್ನು ಹೇಗೆಂದು ವ್ಯಾಖ್ಯಾನಿಸಲಿ? ರಾಜಕಾರಣದ ಮೂಲತತ್ವದ ಸಿದ್ಧಾಂತಗಳು ಮಾಯವಾಗಿ ಜನಹಿತದ ರಕ್ಷಣೆಯೂ ದೂರವಾಗಿ ಕವಲುದಾರಿಯನ್ನು ಹುಡುಕುತ್ತ ಹೊರಟಿರುವ ಸಂದರ್ಭವನ್ನು ವ್ಯಾಖ್ಯಾನಿಸಲು ಶಬ್ದಗಳಿಲ್ಲವೆಂದರೆ ತಪ್ಪಾಗಲಾರದು.

**೭. ಶರಣ ಚಳುವಳಿಯನ್ನು ಮತ್ತೆ ನಿರೀಕ್ಷಿಸಬಹುದೆ?**

**ಉತ್ತರ:** ಈಗಾಗಲೇ ಇಂದಿನ ಚಳುವಳಿಯ ಸ್ವರೂಪವನ್ನು ಉಲ್ಲೇಖಿಸಿದ್ದೇನೆ. ಸತ್ಯಕ್ಕಾಗಿ, ನ್ಯಾಯಕ್ಕಾಗಿ, ಧರ್ಮಕ್ಕಾಗಿ ಶರಣರ ಚಳುವಳಿಯು ಸ್ವರೂಪಗೊಂಡಿದ್ದವು. ಆದರೆ ಇಂದಿನ ಚಳುವಳಿಗಳು ಅವೆಲ್ಲವುಗಳನ್ನು ಗಾಳಿಗೆ ತೂರಿ ಮಾಯವಾಗಿ ಬಿಟ್ಟಿದೆ. ಶರಣ ಚಳುವಳಿಯನ್ನು ನಿರೀಕ್ಷಿಸಬಹುದು ಎಂಬ ಪ್ರಶ್ನೆಗೆ ಉತ್ತರಿಸುವುದು ಕಷ್ಟ ಸಾಧ್ಯ. ಅಂತಹ ಶರಣರ ಚಳುವಳಿಯ ಕಾಲ ಮುಂದೆ ಬರಲೆಂದು ಹಾರೈಸೋಣ. ಶರಣ ಚಳುವಳಿ ಕೇವಲ ಕನಸಾಗಿ ಉಳಿಯಬಾರದು. ಧರ್ಮದ ಚಳುವಳಿ ನನಸಾಗಬೇಕು.

**೮. ನಿಮ್ಮ ಬರವಣಿಗೆಯ ಮೇಲೆ ವಚನಕಾರರ ಪ್ರಭಾವವಿದೆಯೇ?**

**ಉತ್ತರ:** ನನ್ನ ಬರವಣಿಗೆಯ ಮೇಲೆ ವಚನಕಾರರ ಪ್ರಭಾವ ಇಲ್ಲವೆಂದು ಹೇಳುವುದು ಸರಿ ಕಂಡುಬರುತ್ತಿಲ್ಲ. ವಚನಕಾರರ ವಚನಗಳನ್ನು ಅರ್ಥೈಸಿಕೊಂಡು ಅವುಗಳನ್ನು ನಮ್ಮ ಬದುಕಿನ ಪ್ರತಿಯೊಂದು ಕ್ಷಣದಲ್ಲಿ ಅಳವಡಿಸುವ ಶಕ್ತಿ ನಮ್ಮದಾಗಿರುವಾಗಲೆ ವಚನಗಳ ಪ್ರಭಾವ ನಮ್ಮ ಬದುಕಿನ ದಾರಿದೀಪವಾಗಿ ಮಾರ್ಗದರ್ಶನ ಕೊಡಬೇಕೆಂದು ಅಪೇಕ್ಷಿಸುತ್ತೇವೆ. ವಚನಕಾರರ



ಪ್ರಭಾವ ಬಹುದೊಡ್ಡ ಶಬ್ದ. ಆ ವಚನಕಾರರ ಪ್ರಭಾವವನ್ನು ಜೀವನದ ಉದ್ದಕ್ಕೂ ಅರ್ಥೈಸಿಕೊಳ್ಳುವುದೆ ನಾವು ರಚಿಸುವ ಬರವಣಿಗೆ ಮೇಲೆ ಪ್ರಭಾವ ಬೀರಲಿ ಎಂದು ಆಶಿಸುತ್ತೇನೆ.

**೯. ಶರಣ ಚಳುವಳಿಯ ಆಶಯಗಳನ್ನು ಜಾಗತಿಕ ನೆಲೆಯಲ್ಲಿ ತಲುಪಿಸಲು ನಿಮ್ಮ ಯೋಜನೆಗಳು?**

**ಉತ್ತರ:** ನಾವೆಲ್ಲರೂ ಇಂದು ಜಾಗತಿಕ ನೆಲೆಗಟ್ಟಿನಲ್ಲಿ ಬದುಕುತ್ತಿದ್ದೇವೆ. ಶರಣ ಚಳುವಳಿಯ ಆಶಯಗಳು ಜಾಗತೀಕ ನೆಲೆಗಟ್ಟು ಒಂದಕ್ಕೊಂದು ಬಹುದೂರವೆಂದು ಕಂಡುಬರುತ್ತವೆ. ಜಾಗತೀಕ ನೆಲೆ ನಾಗಾಲೋಟದಿಂದ ಓಡುತ್ತಿರುವ ರಭಸದಲ್ಲಿ ೧೨ನೇ ಶತಮಾನದ ಶರಣ ಚಳುವಳಿಯ ಶಕ್ತಿ ಕುಂಟುತ್ತಾ ನಡೆದಿದೆ. ಶರಣ ಚಳುವಳಿಯನ್ನು ಇಂದಿನ ಜಾಗತೀಕ ಮನೋಭಾವದ ಬಹು ಜನರಿಗೆ ತಲುಪಿಸಲು ಜಾಗತೀಕ ನೆಲೆಗಟ್ಟಿನಲ್ಲಿಯೆ ಹೊಸಯೋಜನೆಗಳನ್ನು ಶರಣ ಚಳುವಳಿಯ ಹೊಸ ಆಯಾಮಗಳನ್ನು ಹುಡುಕಬೇಕಾಗಿದೆ. ಅಂತಹ ಯೋಜನೆಗಳು ನನ್ನೊಬ್ಬಳಿಂದ ಸಾಧ್ಯವೆ?

ಈ ಶರಣ ಚಳುವಳಿಯನ್ನು ತಲುಪಿಸಲು ಜನಸಾಮಾನ್ಯರ ಆಚಾರ ವಿಚಾರಗಳು. ಅವರ ಜಾಗತಿಕ ಚಿಂತನೆಗಳು ಅವರು ಬೇಕು ಬೇಕು ಎಂಬ ಆಶಯಗಳು ಎಲ್ಲದಕ್ಕೂ ಕಡಿವಾಣ ಹಾಕಿದಾಗ ಮಾತ್ರ ಶರಣ ಚಳುವಳಿಗೆ ಹೊಸ ರೂಪ ಕೊಡಲು ಸಾಧ್ಯವಾಗಬಹುದು. ಅಂತಹ ಮನೋಭಾವನೆಗಳು ಒಬ್ಬರಿಂದ ಸಾಧ್ಯವಿಲ್ಲ. ಜನಸಾಮಾನ್ಯರ ಸಾಮೂಹಿಕ ಒಗ್ಗಟ್ಟು, ಶರಣ ಸಂಸ್ಕೃತಿ ಸರಳ ಜೀವನ ಉದಾತ್ತ ಚಿಂತನೆ ತ್ಯಾಗ ಮನೋಭಾವನೆ ಪರೋಪಕಾರದ ಧ್ಯೇಯ ಎಲ್ಲವೂ ಮನವರಿಕೆಯಾದಾಗ ಮಾತ್ರ ಜಾಗತೀಕ ನೆಲೆಗಟ್ಟಿನ ಪ್ರಪಂಚದಲ್ಲಿ ಹೊಸ ಬೆಳಕು ಕಾಣಲು ಪ್ರಯತ್ನಿಸಬಹುದು. ಬಿಸಿಲು ಕುದುರೆಯನ್ನು ಕಂಡು ಬದುಕುವ ಜನಕ್ಕೆ ಬದುಕಿನ ನಿಜವಾದ ಅರ್ಥ ಶರಣರ ಬದುಕನ್ನು ಶರಣ ತತ್ವದ ಚಳುವಳಿಯನ್ನು ಅಳವಡಿಸಿಕೊಂಡಾಗ ಮಾತ್ರ ಜಾಗತೀಕ ನೆಲೆಗಟ್ಟಿನ ಇಂದಿನ ಸಮಾಜದಲ್ಲಿ ಬದಲಾವಣೆ ತರಲು ಸಾಧ್ಯವಾದೀತೆಂಬ ಪರಿಕಲ್ಪನೆಯಾಗಿದೆ. ಇದು ಎಷ್ಟರಮಟ್ಟಿಗೆ ಯೋಗ್ಯ ಎಂಬುದನ್ನು ಎಲ್ಲರೂ ಯೋಚಿಸಬೇಕಾದ ಸಮಯ ಒದಗಿಬಂದಿದೆ.

**೧೦. ಇಂದಿನ ಮಹಿಳೆಯರಿಗೂ, ವಚನಕಾರ್ತಿಯರಿಗೂ ಇರುವ ಸಂಬಂಧಾಂತರಗಳು?**

**ಉತ್ತರ:** ಇಂದಿನ ಮಹಿಳೆಯರಿಗೂ ಹಾಗೂ ವಚನಕಾರ್ತಿಯರಿಗೂ ಇರುವ ಸಂಬಂಧದ ಅಂತರಗಳು ಬಹುರೂಪಿಗಳಾಗಿವೆ. ಇಂದಿನ ಮಹಿಳೆಯರು ವಿದ್ಯಾವಂತರಾಗಿದ್ದಾರೆ, ಬುದ್ಧಿವಂತರಾಗಿದ್ದಾರೆ ಹಾಗೂ ಆರ್ಥಿಕ ಸ್ವಾವಲಂಬನದ ಬಲದ ಮೇಲೆ ನಿಂತಿದ್ದಾರೆ. ಇಂದು ಮಹಿಳೆಯರು ಸಮಾಜದ ಮುಖ್ಯವಾಹಿನಿಯಲ್ಲಿ ಮಿಂಚುತ್ತಿದ್ದಾರೆ. ಸ್ವಾವಲಂಬನದ ಜೀವನ, ಆರ್ಥಿಕದ ಸಬಲತೆ, ಬದುಕಿನ ಎಲ್ಲ ವಿಧ ವಿಧ ಆಯಾಮಗಳನ್ನು ಮೈಗೂಡಿಸಿಕೊಂಡು ಬದುಕನ್ನು ಸಾಗಿಸಲು ಹೆಣಗಾಡುತ್ತಿದ್ದಾರೆ. ವಚನಕಾರ್ತಿಯರಿಗೂ ಇಂದಿನ ಮಹಿಳೆಯರಿಗೂ ತುಲನಾತ್ಮಕ ಮಾಡುವುದು ಅಷ್ಟು ಸುಲಭದ ಕೆಲಸವಲ್ಲ. ಅಂದಿನ ವಚನಕಾರ್ತಿಯ ಬದುಕೇ ನಿಜವಾದ ಜೀವನದ ಬದುಕಾಗಿತ್ತು. ಅಂದು ವಚನಕಾರ್ತಿಯರ ಬದುಕಿನಲ್ಲಿ ತೃಪ್ತಿಜೀವನವಾಗಿತ್ತು. ಅವರ ವಚನಗಳನ್ನು ಅವಲೋಕಿಸಿದಾಗ, ಅವರು ಆಸೆ–ಆಮಿಷಗಳಿಗೆ ಬಲಿಯಾಗುತ್ತಿರಲಿಲ್ಲ. ಸರಳ ಜೀವನ, ಉದಾತ್ತ ಚಿಂತನೆ (Simple Living & High Thinking) ಅವರ ಗುರಿಯಾಗಿತ್ತು. ಇಂದಿನ ಮಹಿಳೆಯರು ವಚನಕಾರ್ತಿಯರು ರಚಿಸಿದ ವಚನಗಳನ್ನು ಕೇವಲ ಗಿಳಿಪಾಠಮಾಡಿ ಹಾಡುವುದಕ್ಕಿಂತ ಆ ವಚನದಲ್ಲಿ ಅಡಗಿರತಕ್ಕಂತಹ

ಬದುಕಿನ ಅಮೂಲ್ಯ ಆಯಾಮಗಳನ್ನು ಅಳವಡಿಸಿಕೊಂಡು ಬದುಕಲು ಪ್ರಯತ್ನಿಸಿದರೆ ಜೀವನದ ದೋಣಿಯನ್ನು ಸುಗಮವಾಗಿ ಹುಟ್ಟು ಹಾಕಿ ದಡ ಮುಟ್ಟಲು ಸಾಧ್ಯವಾದೀತೆಂದು ಅರ್ಥೈಸಿಕೊಳ್ಳಬೇಕು. ವಚನಕಾರರು ಬದುಕು "ಬೇಕು ಅನ್ನುವವನು ಬಡವ", "ಸಾಕು ಎನ್ನುವವನು ಶರಣ" ಅಲ್ಲದೆ "ಸಾಕು ಅನ್ನುವವನು ಶ್ರೀಮಂತ" ಇದು ವಚನಕಾರರ ತೃಪ್ತಿ ಜೀವನದ ಸಂದೇಶವಾಗಿತ್ತು.

"ತೃಪ್ತಿ ಜೀವನವೇ ನಿಜವಾದ ಸುಖ ಜೀವನ". ●

'ನಿರ್ಮಾಯ' ನಂ.೬೪, ೧ನೇ ಮುಖ್ಯರಸ್ತೆ, ಲೋಯರ್ ಪ್ಯಾಲೇಸ್ ಆರ್ಚರ್ಡ್ಸ್
ಬೆಂಗಳೂರು-೫೬೦ ೦೦೩ ೯೪೪೮೧ ೧೧೭೦೨

"ಶೂನ್ಯ ಸಂಪಾದನೆ" ಎಂದರೆ ಯಾವುದು ವಾಙ್ಮನಕ್ಕೆ ಅಗೋಚರವಾಗಿದ್ದು ಬುದ್ಧಿಗೆ ಕೇವಲ ಶೂನ್ಯವಾಗಿ ತೋರುವುದೋ ಅಂತಹ ಪರಬ್ರಹ್ಮವಸ್ತುವನ್ನು ಅನುಭವದಿಂದ ಸಂಪಾದಿಸುವುದೇ ಶೂನ್ಯ ಸಂಪಾದನೆಯು. ಇದರಿಂದ ವೀರಶೈವರ ಶೂನ್ಯವೆಂದರೆ–ಬುದ್ಧನ ನಿರ್ವಿಕಾರ ಶೂನ್ಯವಲ್ಲ; ಅದ್ವೈತದ ಜಗನ್ಮಿಥ್ಯತ್ವದ್ದಲ್ಲ; ದ್ವೈತದ ಜೀವಪರಮಾತ್ಮರ ಭೇದವಲ್ಲ; ಅದು ಶಕ್ತಿ ವಿಶಿಷ್ಟಾದ್ವೈತವೇ. ಜಗತ್ತೂ ಜೀವನೂ ಪರಬ್ರಹ್ಮನಂತೆ ಸತ್ಯವಸ್ತುಗಳೆಂದೂ ಕೊನೆಗೂ ಅವೆಲ್ಲವೂ ಪರಬ್ರಹ್ಮನಲ್ಲಿ ಲೀನವಾಗಿ ಅವನಲ್ಲಿಯೇ ಅಡಗಿಕೊಂಡಿರುವುದೆಂದೂ ಅದು ಹೇಳುತ್ತದೆ. ಈ ಅವ್ಯಕ್ತಸ್ಥಿತಿಗೆ ವೀರಶೈವ ಧರ್ಮದಲ್ಲಿ 'ನಿಷ್ಕಲ'ವೆಂದೆನ್ನುತ್ತಾರೆ. ಪದಾರ್ಥಕ್ಕೂ ಅದರೊಳಗಿನ ಶಕ್ತಿಗೂ, ಲೋಹಚುಂಬಕ್ಕೂ ಅದರ ಆಕರ್ಷಣ ಶಕ್ತಿಗೂ, ಸೂರ್ಯನಿಗೂ ಅದರ ಕಿರಣಗಳಿಗೂ ಇರುವ ಬಂಧವೇ ಜೀವಬ್ರಹ್ಮರ ಸಂಬಂಧವು.

– ರೆ. ಸಿ.ಡಿ. ಉತ್ತಂಗಿ ಚೆನ್ನಪ್ಪ

## ಶ್ರದ್ಧಾಂಜಲಿ

### ಶ್ರೀ ಜಿ.ಬಿ. ವೀರಭದ್ರಯ್ಯ



ಬಸವಾದಿ ಶಿವಶರಣರು ಹಾಕಿಕೊಟ್ಟ ಸನ್ಮಾರ್ಗದಲ್ಲಿ ನಡೆಯುತ್ತಾ, ಕಾಯೇನ ವಾಚಾ ಮನಸಾ ಶರಣ ಧರ್ಮದ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಸತ್ಯ ಶುದ್ಧ ಕಾಯಕ ಜೀವಿಯಾಗಿ, ಜಂಗಮ ಸ್ವರೂಪಿ ಸಮಾಜಕ್ಕೆ ಅವಿರತವಾಗಿ ದಾಸೋಹವನ್ನು ಮಾಡುತ್ತಾ ತಮ್ಮ ಜೀವನವನ್ನು ಸಾರ್ಥಕ ಗಳಿಸಿಕೊಂಡ ಶರಣ ಶ್ರೀ ಜಿ.ಬಿ. ವೀರಭದ್ರಯ್ಯನವರು, ನಿನ್ನೆ (೨೩.೦೭.೨೦೨೦) ಹುಬ್ಬಳ್ಳಿಯ ನಾಗಶೆಟ್ಟಿಕೊಪ್ಪದಲ್ಲಿ ತಮ್ಮ ೭೫ನೇ ವಯಸ್ಸಿನಲ್ಲಿ ಲಿಂಗೈಕ್ಯರಾಗಿದ್ದಾರೆ. ೨೦೧೩-೧೪ರಲ್ಲಿ ಹುಬ್ಬಳ್ಳಿ ತಾಲೂಕು ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಹತ್ತು ಹಲವು ಕಾರ್ಯಕ್ರಮಗಳ ಮೂಲಕ ಶರಣರ ತತ್ವಗಳನ್ನು ಪಸರಿಸಿದವರು. ಬಹಳ ಹಿಂದೆಯೇ ತಮ್ಮ ತಂದೆ-ತಾಯಿಯವರ ಹೆಸರಿನಲ್ಲಿ ರೂ. ೫೦ ಸಾವಿರಗಳನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿಗೆ ನೀಡಿ ನಿರಂತರವಾಗಿ ಪ್ರತಿವರ್ಷ ಕಾರ್ಯಕ್ರಮಗಳಲ್ಲಿ ಸ್ವತಃ ಪಾಲ್ಗೊಂಡು, ಹೆಚ್ಚಿನ ಹಣ ನೀಡಿ ವಿದ್ಯಾರ್ಥಿಗಳನ್ನು ಪುರಸ್ಕರಿಸಿ ಸಂತೋಷಪಟ್ಟವರು. ಪ್ರಸ್ತುತ ಹುಬ್ಬಳ್ಳಿ ತಾಲೂಕು ಶರಣ ಸಾಹಿತ್ಯ ಪರಿಷತ್ತಿನ ಗೌರವ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದರು. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಅವರ ಆತ್ಮಕ್ಕೆ ಶಾಂತಿಯನ್ನು ಮತ್ತು ಅವರ ಕುಟುಂಬದವರಿಗೆ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿ ನೀಡಲಿ ಎಂದು ಭಗವಂತನಲ್ಲಿ ಕೋರುತ್ತದೆ.



# ಕಾಯಕ ತಪಸ್ವಿ ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು

ಪ್ರೊ. ಮಲೆಯೂರು ಗುರುಸ್ವಾಮಿ

ಭರತಖಂಡದ ಇತಿಹಾಸವನ್ನು ಅವಲೋಕಿಸಿದರೆ ಎದ್ದು ಕಾಣುವ ಪ್ರಮುಖ ಅಂಶವೆಂದರೆ, ರಾಜಕೀಯ ಇತಿಹಾಸಕ್ಕಿಂತ ಹೆಚ್ಚು ಗಂಭೀರವಾಗಿ ಪರಿಗಣಿಸಲ್ಪಟ್ಟಿರುವುದು ಧಾತ್ಮಿಕ ಇತಿಹಾಸ. ಆದರೆ ಇದು ವಸ್ತು ಸತ್ಯಕ್ಕಿಂತ ಹೆಚ್ಚಾಗಿ ಆಯಾ ಸಮುದಾಯದ ಭಾವಕೋಶದಲ್ಲಿ ಪರಿಭಾವಿತವಾಗಿರುವ ಚರಿತ್ರೆ. ಪ್ರಾಯಃ ಇದಕ್ಕೆ ಭಾರತೀಯರು ಬದುಕನ್ನು ಗ್ರಹಿಸಿದ ಕ್ರಮವೇ ಕಾರಣವಾಗಿದೆ. ನಮ್ಮ ಜನಪದರಿಗೆ ನಿತ್ಯದ ಜಗದ ಜಂಜಡಗಳು, ಕಾಲಕಾಲಕ್ಕೆ ಬದಲಾಗುತ್ತಿದ್ದ ಆಳರಸರು, ಅವರ ಸೋಲುಗೆಲುವುಗಳು, ಭೋಗ ಜೀವನದ ರೀತಿ ರಿವಾಜುಗಳು ಗಂಭೀರವಾಗಿ ಪರಿಭಾವಿಸಬೇಕಾದ ಅಂಶಗಳು ಎಂದು ಅನ್ನಿಸಿರಲೇ ಇಲ್ಲ. ಭೂಮಿಯೊಡನೆ ತಮ್ಮ ಬದುಕನ್ನು ಕಾಯಾ ವಾಚಾ ಮನಸಾ ಬೆಸೆದುಕೊಂಡಿದ್ದ ಇವರು ಉತ್ತುಬಿತ್ತಿ ಬೆಳೆದು ಸಕಲ ಜೀವರಿಗೆ ಲೇಸ ಬಯಸುತ್ತಾ ಬದುಕುವುದಷ್ಟೇ ತಮ್ಮ ಪಾಲಿನ ಕರ್ತವ್ಯ ಎಂದು ಭಾವಿಸಿಕೊಂಡಿದ್ದರು. ಈ ಸೃಷ್ಟಿಯ ಅಣುರೇಣು ತೃಣ ಕಾಷ್ಠಗಳೂ ಸಹ ಒಂದು ಜಗನ್ನಿಯಮಕ್ಕೆ ಬದ್ಧವಾಗಿ ಅಸ್ತಿತ್ವದಲ್ಲಿವೆ. ಈ ನಿಯಮಕ್ಕೆ ನಿಯಾಮಕನೊಬ್ಬನಿದ್ದಾನೆ; ಅವನಷ್ಟೇ ಸತ್ಯ; ಉಳಿದದ್ದೆಲ್ಲವೂ ಇಂದು ಬಂದು ನಾಳೆ ಸಂದು ಹೋಗುವಂತಹವು. ಆದ್ದರಿಂದ ಅವುಗಳನ್ನು ಕುರಿತು ಚಿಂತಿಸುವುದಾಗಲೀ, ದಾಖಲಿಸುವುದಾಗಲೀ ಏನು ಮಹಾ ಎನ್ನುವ ದಿವ್ಯನಿರ್ಲಕ್ಷ್ಯ ದಿಂದ ಬಾಳಿದವರು. ಆದ್ದರಿಂದಲೇ ಸಮೃದ್ಧವಾಗಿ ಸೃಷ್ಟಿಯಾಗಿರುವ ಜನಪದ ಸಾಹಿತ್ಯದ ಲೇಖಕರ ಮಹಾನ್ ಶಿಲ್ಪಿಗಳ, ಕೆರೆಕಟ್ಟೆ ಬಾವಿಗಳನ್ನು, ಅನ್ನಛತ್ರಗಳನ್ನು ನಿರ್ಮಾಣ ಮಾಡಿದವರ ಹೆಸರುಗಳು ಹೆಚ್ಚಿನ ಸಂಖ್ಯೆಯಲ್ಲಿ ದಾಖಲಾಗಿಲ್ಲ. ಅವರಿಗೆಲ್ಲಾ ಇವು ಒಂದು ರೀತಿಯಲ್ಲಿ ಲೌಖಿಕವಾದವುಗಳು. ಆದ್ದರಿಂದಲೇ ಧರ್ಮ ಸಂಬಂಧೀ ಅಂಶಗಳು ಮೇಲುಗೈ ಪಡೆದು ದಾಖಲಾತಿಗೆ ಅರ್ಹವೆನಿಸಿ ಜನಪದರ ಒಳಹೊರಗನ್ನು ಆವರಿಸಿಕೊಂಡವು. ಈ ಕಾರಣಕ್ಕಾಗಿಯೇ ಧರ್ಮೋಪದೇಶಕರು, ಸಿದ್ಧಾಂತಿಗಳು, ಧರ್ಮಶಾಖೆಗಳು, ಧಾರ್ಮಿಕ ಕ್ಷೇತ್ರಗಳು, ದೇವಾನು ದೇವತೆಗಳು, ಅವರ ಸುತ್ತ ಪೌರಾಣಿಕ ಪರಿವೇಶಗಳು ಹಂತಹಂತವಾಗಿ ಸಮುದಾಯದ ಭಾವಕೋಶದಲ್ಲಿ ಬೀಡುಬಿಟ್ಟವು. ಈ ಅಂಶಗಳು ಅವರವರ ಸಂಸ್ಕಾರ, ಸಾಹಚರ್ಯದ ಹಿನ್ನೆಲೆಯಲ್ಲಿ ಒಂದು ಮತ ಅನೇಕ ಮತಗಳಾದದ್ದು, ಒಬ್ಬನೇ ದೇವರು ನೂರಾರು ಆಕಾರಗಳನ್ನು ಪಡೆದು ವಿಭಿನ್ನ ಹೆಸರುಗಳನ್ನು ಪಡೆದದ್ದು, ಒಂದು ಸಿದ್ಧಾಂತ ಬೇರೆ ಬೇರೆಯ ಸಿದ್ಧಾಂತಗಳಿಗೆ ದಾರಿ ಮಾಡಿಕೊಡುತ್ತಾ ಬಂದುದು ಈ ಹಿನ್ನೆಲೆಯಲ್ಲಿ.

ವ್ಯಕ್ತಿ ಎಷ್ಟೇ ವೈಚಾರಿಕವಾಗಿ ಚಿಂತಿಸಿದರೂ ಸಮುದಾಯ ಮಾತ್ರ ಹೆಚ್ಚು ಭಾವುಕತೆಯತ್ತಲೇ ವಾಲಿರುತ್ತದೆ. ಅದರಲ್ಲೂ ಧಾರ್ಮಿಕ, ಆಧ್ಯಾತ್ಮಿಕ ವಿಷಯದಲ್ಲಂತೂ ಇದರದ್ದೇ ಮೇಲುಗೈ. ಆದ್ದರಿಂದಲೇ ಈ ಸಂಬಂಧವಾದ ವಿಚಾರಗಳಲ್ಲಿ ಸ್ಪಷ್ಟತೆ ಸರಳತೆಗಳನ್ನು ಹುಡುಕುವುದು ತುಸುಕಷ್ಟವೇ. ಹಾಗೆಂದರೆ ಇಲ್ಲಿ ಸತ್ಯಕ್ಕೆ ಅಪಚಾರವಾಗಿದೆ ಎಂದು ಅರ್ಥವಲ್ಲ. ಆ ಸತ್ಯದ ಸ್ತರ ಬೇರೆಯ ನೆಲೆಯದು. ಅದೊಂದು ಭಾವಸತ್ಯ, ಅಸಾಮಾನ್ಯ ಎನ್ನುವುದೆಲ್ಲಾ ಹೆಚ್ಚು ಸಂದರ್ಭಗಳಲ್ಲಿ ಭಾವಸತ್ಯಗಳೇ ಆಗಿರುತ್ತವೆ. ಆಂಜನೇಯನನ್ನು ಒಂದು ಸಾಮಾನ್ಯ ವಾನರನ ಗಾತ್ರದಲ್ಲಿ ಕಲ್ಪಿಸಿಕೊಂಡಾಗ, ಅವನು ಸಮುದ್ರಲಂಘನ ಮಾಡಿದ ಎನ್ನುವುದು ಕೇವಲ

ಸುಳ್ಳಾಗುತ್ತದೆ. ಅವನನ್ನು ನಮ್ಮ ಕಣ್ಣಿಗೆ ಕಾಣುವ ಕೋತಿಗಿಂತ ಸಹಸ್ರಪಟ್ಟು ದೊಡ್ಡದಾಗಿಸಿದಾಗ ಮಾತ್ರ ಸಮುದ್ರದ ಆಕಾರ-ವ್ಯಾಪ್ತಿ- ಚಿಕ್ಕದೆನಿಸುತ್ತದೆ. ಆಗ ಈ ಕ್ರಿಯೆ ನಡೆದಿರುವ ಸಾಧ್ಯತೆಯನ್ನು ಮನಸ್ಸು ಸುಲಭವಾಗಿ ಗ್ರಹಿಸುತ್ತದೆ ಮತ್ತು ಅದನ್ನು ಅಷ್ಟೇ ಸುಲಭವಾಗಿ ಅನುಭವಿಸುತ್ತದೆ. ಪ್ರಾಯಃ ನಮ್ಮ ಧರ್ಮ ಸಂಬಂಧೀ ವಿಚಾರಗಳ ಸುತ್ತ ಏಕೆ ಪೌರಾಣಿಕ ಪರಿವೇಷವೊಂದು ನಿರ್ಮಾಣವಾಗಿರುತ್ತದೆ ಎನ್ನುವುದಕ್ಕೆ ಮೇಲಿನ ಮಾತುಗಳು ಒಂದಿಷ್ಟು ಸಮಜಾಯಿಷಿ ಕೊಡುತ್ತದೆ ಎಂದು ನಾನು ಭಾವಿಸುತ್ತೇನೆ.

ಆದರೆ ಸುತ್ತೂರು ಶ್ರೀಮಠದ ಗುರುಪರಂಪರೆಯ ಚರಿತ್ರೆಯಲ್ಲಿ ಇಂತಹ ಯಾವುದೇ ಪೌರಾಣಿಕ ಪರಿವೇಷ ಕಂಡುಬರದೆ ವಾಸ್ತವ ಬದುಕಿನ ಪ್ರಖರ ಚಿಂತನೆ ಹಾಗೂ ಜೀವಪರ ಅಂಶಗಳು ಮಾತ್ರ ಕಂಡುಬರುತ್ತವೆ. ಸುತ್ತೂರಿನಲ್ಲಿ ಆದಿಜಗದ್ಗುರು ಶ್ರೀ ಶಿವರಾತ್ರೀಶ್ವರರು ನೆಲೆಗೊಂಡದ್ದೇ ಒಂದು ವಿಶಿಷ್ಟ ಸನ್ನಿವೇಶದಲ್ಲಿ, ಅದು ತಮಿಳುನಾಡಿನ ರಾಜೇಂದ್ರ ಚೋಳನು ತಲಕಾಡಿನ ದೊರೆ ಮಾರಸಿಂಹನ ಮೇಲೆ ದಂಡೆತ್ತಿ ಬಂದದ್ದು; ಆ ಯುದ್ಧದಿಂದ ನಡೆಯಬಹುದಾಗಿದ್ದ ಅಮಾಯಕರ ಮಾರಣ ಹೋಮವನ್ನು ತಪ್ಪಿಸಿ, ಶೈವ ಪರಂಪರೆಯ ಚೋಳ ಚಕ್ರವರ್ತಿ ಹಾಗೂ ಜೈನ ಪರಂಪರೆಯ ಗಂಗರ ರಾಚಮಲ್ಲ – ಈ ಈರ್ವರ ನಡುವೆ ಭ್ರಾತೃತ್ವವನ್ನು ಬೆಳೆಸಿ, ಧರ್ಮ ಸಮನ್ವಯಕ್ಕೆ ನಾಂದಿ ಹಾಡಿದ್ದು, ಅಂದಿಗಷ್ಟೇ ಅಲ್ಲ! ಎಂದೆಂದಿಗೂ ಪ್ರಸ್ತುತವಾಗಬಲ್ಲ, 'ಧರ್ಮ ಗುರು' ಎನಿಸಿಕೊಂಡವರು ಮಾಡಲೇಬೇಕಾದ ಜೀವಪರವಾದ ಕೆಲಸವೇ ಆಗಿದೆ. ಅಂದಿನಿಂದ ಇಂದಿನ ತನಕವೂ ಶ್ರೀಮಠದ ಕರ್ಣಧಾರತ್ವವನ್ನು ವಹಿಸಿಕೊಂಡು ಬಂದ ಎಲ್ಲ ಗುರುಗಳೂ ಸಮಾಜಮುಖಿಯಾದ ಅನಂತಕಾರ್ಯಗಳನ್ನು ಮಾಡುವುದನ್ನೇ ತಪಸ್ಸನ್ನಾಗಿ ಮಾಡಿಕೊಂಡು ಬಂದಿರುವುದು ಸರ್ವವಿದಿತ.

ಕಲ್ಯಾಣದ ಕ್ರಾಂತಿಯ ನಂತರ ಮುಸುಡಿ ಚೌಡಯ್ಯನಂತಹ ಶರಣರು ಶ್ರೀಮಠದ ಆಶ್ರಯ ಕೋರಿ ಬಂದದ್ದು; ಈ ಭಾಗದ ಸಾಂಸ್ಕೃತಿಕ ನಾಯಕರೆಂದೇ ಪ್ರಸಿದ್ಧರಾಗಿರುವ ಶ್ರೀ ಮಲೆಯ ಮಹದೇಶ್ವರರು ಇಲ್ಲಿ ಕಾಯಕ ತತ್ವವನ್ನು ಮೆರೆದದ್ದು; ವಚನ ಸಾಹಿತ್ಯದ ಸಂಗ್ರಹ, ಸಂಪಾದನೆಯ ಕಾಯಕವನ್ನು ಯಶಸ್ವಿಯಾಗಿ ಮಾಡಿ, ಬಹುದೊಡ್ಡ ಶಿಷ್ಯ ಪರಂಪರೆಯನ್ನು ರೂಪಿಸಿ, ದ್ವಿತೀಯ ಅಲ್ಲಮರೆಂದೇ ಖ್ಯಾತರಾದ ಶ್ರೀ ತೋಂಟದ ಸಿದ್ಧಲಿಂಗಯತಿಗಳು ಶ್ರೀಮಠಕ್ಕೆ ಬಂದು ಇಲ್ಲಿನ ಪೀಠಾಧಿಪತಿಯಾಗಿದ್ದ ಘನಲಿಂಗ ಶಿವಯೋಗಿಗಳ ಮೇಲೆ ಪ್ರಭಾವ ಬೀರಿದ್ದು, – ಈ ಒಂದೊಂದೂ ದಾಖಲಾರ್ಹ ಸಂಗತಿಗಳೇ ಆಗಿವೆ.

ಇಂತಹ ಬಹುದೊಡ್ಡ ಪರಂಪರೆಯ ವಾರಸುದಾರರಾಗಿ 23ನೇ ಪೀಠಾಧಿಪತಿಗಳಾಗಿ ಬಂದವರೇ ಜಗದ್ಗುರು ಡಾ. ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು (1916–1986) ಪರಮಪೂಜ್ಯರು ಹಿಂದಿನ ಎಲ್ಲ ಪೂಜ್ಯರುಗಳ 'ಕರ್ತೃತ್ವ ಶಕ್ತಿ'ಯ ಮಾನವರೂಪ ಎಂದರೆ ಅತಿಶಯೋಕ್ತಿಯಾಗಲಾರದು.

ಮುಂದೆ ಪರಮಪೂಜ್ಯರು ಪಡೆದುಕೊಂಡ 'ಬೌದ್ಧಿಕ ವಿದ್ಯೆ'ಗಿಂತ ಅವರು ಆವಾಹಿಸಿಕೊಂಡ 'ಜೀವಕಾರುಣ್ಯ' ಗುಣ ಬಹುದೊಡ್ಡದು. ವಿದ್ಯಾಭ್ಯಾಸಕ್ಕಾಗಿ ಗ್ರಾಮೀಣ ಭಾಗದ ಯುವಕರು ಪಡುತ್ತಿದ್ದ ಬವಣೆ ಪರಮಪೂಜ್ಯರ ಮನಸ್ಸನ್ನು ಕರಗಿಸಿಬಿಡುತ್ತದೆ. ಸ್ವಾತಂತ್ರ್ಯಪೂರ್ವದ ದಿನಮಾನಗಳ, 'ರೇಷನ್' ಸಮಸ್ಯೆ, ಶ್ರೀಮಠದ ಆರ್ಥಿಕ ಪರಿಸ್ಥಿತಿ – ಈ ಎರಡೂ ಇವರ ಸೇವಾ ಕೈಂಕರ್ಯದ ಮನೋಭಿಲಾಷೆಗೆ ಪೂರಕವಾಗಿಲ್ಲದಿದ್ದರೂ 'ಕೊಡುವವನು ಸಂಗ; ಕೊಳ್ಳುವವನು ಸಂಗ' ಎನ್ನುವ ನಿಲುವನ್ನು ತಳೆದು ಗಟ್ಟಿ, ಹೆಜ್ಜೆ ಇಟ್ಟೇ



ಬಿಡುತ್ತಾರೆ. ತಮ್ಮ ಸಮಾಜೋ-ಧಾರ್ಮಿಕ ಕಾರ್ಯಗಳಿಂದ ವೀರಶೈವ ಮಠಪರಂಪರೆಗೆ ಬಹುದೊಡ್ಡ ಗೌರವ ತಂದುಕೊಟ್ಟವರು ಶ್ರೀ ರಾಜೇಂದ್ರ ಶ್ರೀಗಳು.

ಸುತ್ತೂರು ಶ್ರೀ ಮಠ ಧಾರ್ಮಿಕ, ಸಾಮಾಜಿಕ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದ ಮಹತ್ ಸಾಧನೆಯ ಮೂಲ ಪುರುಷರು ಇವರು. ಸಾಮಾಜಿಕ ಬದುಕು ಅರಿವು, ಆರೋಗ್ಯ, ಆರ್ಥಿಕತೆಗಳಲ್ಲಿ ಸಮೃದ್ಧಗೊಳ್ಳದೆ ಕೇವಲ ಆಧ್ಯಾತ್ಮ ಸಂಬಂಧಿ ವಿಚಾರಗಳಿಂದ ಏನೂ ಸಾಧಿತವಾಗುವುದಿಲ್ಲ ಎಂದು ಮನಗಂಡ ಪೂಜ್ಯರು ಕಾಲಧರ್ಮಕ್ಕೆ ತಕ್ಕಂತೆ ಅಂದು ಹಾಕಿದ ಅಮೃತ ಬೀಜ ಇಂದು ಹೆಮ್ಮರವಾಗಿ ಬೆಳೆದು ತನ್ನ ರೆಂಬೆ ಕೊಂಬೆಗಳನ್ನು ಕಡಲಾಚೆಗೂ ಚಾಚಿದೆ.

ತಮ್ಮ ಹನ್ನೆರಡನೇ ವಯಸ್ಸಿನಲ್ಲಿಯೇ (24–2–1928) ಶ್ರೀ ಪೀಠದ ಆಶ್ರಮಾಧಿಕಾರವನ್ನು ಪಡೆದ ಪೂಜ್ಯರು ಬೆಳೆದು ಬಂದ ಪರಿ, ತಮ್ಮ ಸುತ್ತಮುತ್ತಲ ಜನ ಸಮುದಾಯದ ಬದುಕನ್ನು ಬೆಳೆಸಿದ ಪರಿ ಪವಾಡ ಸದೃಶವಾದುದು. ಹಿರಿಯ ಜಗದ್ಗುರುಗಳವರಿಗೆ ಇವರ ಬಗ್ಗೆ ಅಪಾರ ನಂಬಿಕೆ. ತಮ್ಮೆಲ್ಲ ಕನಸುಗಳ ಸಾಕಾರ ರೂಪವೇ ಇವರು ಎನ್ನುವ ಭಾವ ಅವರ ಅಂತರಂಗ ಬಹಿರಂಗಗಳನ್ನು ವ್ಯಾಪಿಸಿತ್ತು. ಬಾಲಲೀಲೆಗಳಲ್ಲಿ ಕಾಲಕಳೆಯಬೇಕಾದ ವಯೋಮಾನದಲ್ಲಿ ಶ್ರೀ ರಾಜೇಂದ್ರ ಸ್ವಾಮಿಗಳವರಲ್ಲಿ ಸುಪ್ತವಾಗಿ ಅಡಗಿದ್ದ ಮಹಾನ್ ಶಕ್ತಿಯನ್ನು ಅರಿತುಕೊಂಡ ಶ್ರೀ ಶಿವರಾತ್ರಿ ಶಿವಾಚಾರ್ಯರು ವಿದ್ಯಾಭ್ಯಾಸಕ್ಕಾಗಿ ಮೈಸೂರಿನ ನಮ:ಶಿವಾಯ ಮಠದಲ್ಲಿ ಅದಕ್ಕೆ ವ್ಯವಸ್ಥೆ ಮಾಡಿದರು.

1933ನೇ ಇಸವಿಯಲ್ಲಿ ಕ್ಯಾತನಹಳ್ಳಿ ಸಿದ್ಧಲಿಂಗಯ್ಯನವರು ಶ್ರೀಮಠಕ್ಕೆ ಕೊಟ್ಟಿದ್ದ ಕಟ್ಟಡದಲ್ಲಿ (ಇದು ಕ್ಯಾತನಹಳ್ಳಿ ಹಾಸ್ಟೆಲ್ ಎಂದು ಈಗಲೂ ಪ್ರಸಿದ್ಧಿಯಾಗಿದೆ. ಮಂತ್ರ ಮಹರ್ಷಿಗಳು ಅದಾಗಲೇ ಸಂಸ್ಕೃತ ಪಾಠಶಾಲೆ ಮತ್ತು ವಿದ್ಯಾರ್ಥಿನಿಲಯವೊಂದನ್ನು ಪ್ರಾರಂಭಿಸಿದ್ದರು. ಈಗ ಅದರ ಮೇಲ್ವಿಚಾರಣೆಯ ಜವಾಬ್ದಾರಿ ಪೂಜ್ಯ ಶ್ರೀಗಳವರ ಪಾಲಿಗೆ ಬಂದಿತು. ಸಂಪನ್ಮೂಲಗಳ ಮಿತಿಯಿಂದಾಗಿ ಅಲ್ಲಿ ಕೆಲವೇ ವಿದ್ಯಾರ್ಥಿಗಳಿಗೆ ಮಾತ್ರ ವ್ಯವಸ್ಥೆ ಮಾಡಲು ಸಾಧ್ಯವಾಗಿತ್ತು. ಅನೇಕ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳ ಸಮಸ್ಯೆಗಳನ್ನು ಕಣ್ಣಾರೆ ಕಾಣುತ್ತಿದ್ದ ಶ್ರೀ ರಾಜೇಂದ್ರರಿಗೆ ಹೇಗಾದರೂ ಇವರಿಗೆಲ್ಲಾ ಸಾಧ್ಯವಾದಷ್ಟು ವ್ಯವಸ್ಥೆ ಮಾಡಬೇಕು ಎನ್ನುವ ಚಿಂತನೆ ಸದಾ ಸ್ಥಾಯಿಯಾಗಿ ಕಾಡಿಸುತ್ತಲೇ ಇತ್ತು, ಆದರೆ ತಮ್ಮ ಮನದಾಳದ ಬಯಕೆಗಳನ್ನು ಹಿರಿಯ ಗುರುಗಳ ಮುಂದೆ ಇಟ್ಟು ಅವರ ಒಪ್ಪಿಗೆಯನ್ನು ಪಡೆಯುವ ಧೈರ್ಯ ಬರುತ್ತಲೇ ಇರಲಿಲ್ಲ. ಆಹಾರ ಧಾನ್ಯಗಳ ತುಟ್ಟಿ ಕಾಲವಾಗಿದ್ದ ಸ್ವಾತಂತ್ರ್ಯಪೂರ್ವದ ಆ ದಿನಗಳಲ್ಲಿ ಸೇವಾ ಕ್ಷೇತ್ರದಲ್ಲಿ ಒಂದೊಂದು ಹೆಜ್ಜೆ ಇಡಬೇಕಾದರೂ ಅದರ ಸಾಧಕ ಬಾಧಕಗಳನ್ನು ಗಂಭೀರವಾಗಿ ಚಿಂತಿಸಬೇಕಾಗಿತ್ತು. ಆದರೂ ಶ್ರೀ ರಾಜೇಂದ್ರರ ಒಳಗಿನ ಒತ್ತಡ ದಿನದಿನಕ್ಕೂ ಹೆಚ್ಚಾಗುತ್ತಲೇ ಇತ್ತು.

**ಅದೊಂದು ದಿನ**

ಹಾಸ್ಟೆಲ್‌ನ ಮುಂಭಾಗದಲ್ಲಿ ಇದ್ದ ಅರಳೀಮರದ ಕಟ್ಟೆಯ ಮೇಲೊಬ್ಬ ಯುವಕ ಮಲಗಿಕೊಂಡಿದ್ದ, ಮೊತ್ತ ಮೊದಲು ಕಂಡಾಗ ಯಾರೋ ಇರಬೇಕೆಂದು ಲೋಕಾರೂಢಿ ನೋಟವೊಂದನ್ನು ಚೆಲ್ಲಿ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು ಸುಮ್ಮನಾದರು. ಸಂಜೆ ಮತ್ತೊಮ್ಮೆ ಕಟ್ಟೆಯ ಮೇಲೆ ಕಣ್ಣಾಡಿಸಿದಾಗ ಆ ಯುವಕ ಅದೇ ಭಂಗಿಯಲ್ಲಿಯೇ ಮಲಗಿದ್ದ, ಪೂಜ್ಯರಿಗೆ ಕುತೂಹಲವನ್ನು ತಾಳಲಾಗಲಿಲ್ಲ; ಹತ್ತಿರ ನಡೆದರು. ಹುಡುಗ

ತಮ್ಮ ಪ್ರಸಾದ ನಿಲಯಗಳಲ್ಲಿ ಅಧ್ಯಯನ ಮಾಡಿ ಮುಂದೆ ಅವರು ಜೀವನದ ಬೇರೆ ಬೇರೆ ರಂಗಗಳಲ್ಲಿ ಕರ್ತವ್ಯ ನಿರತರಾದಾಗಲೂ ಪೂಜ್ಯರು ಅವರ ಯೋಗಕ್ಷೇಮವನ್ನು ವಿಚಾರಿಸುತ್ತಾ ದೂರವಾಣಿ ಮೂಲಕ, ಪತ್ರ ಮುಖೇನ ಅವರಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಕರ್ನಾಟಕ ರಾಜ್ಯದ ಮುಖ್ಯ ಇಂಜಿನಿಯರ್ ಆಗಿದ್ದ ಎಂ.ಎಸ್. ಪರಶಿವಮೂರ್ತಿಯವರಿಗೆ ಪರಮ ಪೂಜ್ಯರು ಬರೆದ ಒಂದು ಪತ್ರ ಹೀಗಿದೆ –

*"ನೀನು ಲಿಂಗಪೂಜೆಯನ್ನು ಹೇಗೆ ಮಾಡುತ್ತೀಯೋ ಗೊತ್ತಿಲ್ಲ. ಆಂತರಂಗಿಕ ಪೂಜೆಯನ್ನು ಮಾಡಿದರೆ ಸಾಕೆಂದು ಭ್ರಮೆ ಹೊಂದಬೇಡ, ಬಹಿರಂಗದ ಪೂಜೆಯ ಅಭ್ಯಾಸವೇ ಇಲ್ಲದ ನಿನಗೆ ಅಂತರಂಗದ ಪೂಜೆಯ ನೆಲೆಯೇ ತಿಳಿಯುವುದಿಲ್ಲ. ಆದ್ದರಿಂದ ಅವಶ್ಯ ಹೆಚ್ಚು ಪ್ರಯತ್ನ ಮಾಡಿಯಾದರೂ ಎರಡು ಹೊತ್ತು ತಪ್ಪದೆ ಪೂಜೆ ಮಾಡುವ ಪ್ರಯತ್ನ ಮಾಡು. ತುಂಬಾ ಬೇಜಾರಾಗುತ್ತದೆ, ಏನೂ ಕೆಲಸವಿಲ್ಲ ಎಂದು ತಿಳಿಸಿರುತ್ತೀಯೇ. ಕೆಲಸವಿಲ್ಲದಾಗ ನಿನ್ನ ಜೀವನದ ಧ್ಯೇಯವನ್ನು ಸಾಧಿಸುವ ಕೆಲಸವನ್ನು ಮಾಡಿಕೊಳ್ಳಬಹುದು. ಇರುವ ಸಮಯವನ್ನು ಕ್ಲಬ್ಬಿನಲ್ಲಿ ಕಳೆದು ವೃಥಾ ಹಾಳು ಮಾಡಿಕೊಳ್ಳಬೇಡ. ಹೀಗೆ ನಿರ್ದಾಕ್ಷಿಣ್ಯವಾಗಿ ಬರೆದರೆಂದು ಸಿಟ್ಟಾಗಬೇಡ. ಈ ಜೀವನವು ಶಾಶ್ವತವಲ್ಲ. ಸುಖವು ಕೊನೆಯವರೆಗೂ ಇದ್ದರೂ ಮುಂದೆ ಕರ್ತವ್ಯ ಕರ್ಮದಲ್ಲಿ ನೀನು ಎಚ್ಚರದಿಂದಿರಬೇಕು. ಅದಕ್ಕಾಗಿ ನೀನು ಏನು ಮಾಡಿಕೊಳ್ಳಬೇಕೆಂಬುದು ಮರೆಯಬೇಡ. ಅವಕಾಶ ಸಿಕ್ಕಿದಾಗ ನಿನ್ನ ಕೆಲಸವನ್ನು ನೀನು ಮಾಡಿಕೊಳ್ಳುವುದು ಜವಾಬ್ದಾರಿ ಮತ್ತೆ ವಿವೇಕಾನಂದ, ಬುದ್ಧ, ಇವರುಗಳ ಗ್ರಂಥವನ್ನು ಅಭ್ಯಾಸ ಮಾಡು, ಧ್ಯಾನ, ಮಾನಸಿಕ ಜಪ ಇವುಗಳನ್ನು ಮಾಡು. ಇದೆಲ್ಲವೂ ಮುಂದೆ ನಿನ್ನ ಧ್ಯೇಯ ಸಾಧನೆಗೆ ಸಾರ್ಥಕವಾಗುತ್ತೆ. ಖಂಡಿತ ಯಾವಾಗಲೂ ಮರೆಯದೆ ಅವಕಾಶ ಸಿಕ್ಕಿದಾಗ ಮಾಡುತ್ತೀಯೆಂದು ನಂಬಿರುತ್ತೇನೆ. "ಪ್ರಪಂಚದ ಸಂಸಾರವನ್ನೆಲ್ಲ ಕಟ್ಟಿಕೊಂಡಿರುತ್ತೀರಿ ಎಂದು ಬರೆದಿರುತ್ತೀಯೆ. ಹಾಗೆಂದಿಗೂ ಅಲ್ಲ ಕಟ್ಟುವುದು ಬಿಡುವುದು ನಮ್ಮದಲ್ಲ ಎಲ್ಲವೂ ದೈವೇಚ್ಛೆ. ನನ್ನ ಒಂದೊಂದು ಕೆಲಸವೂ ಪರಮಾತ್ಮನ ಇಚ್ಛೆಯಿಂದ ನಡೆಯುವುದೇ ಹೊರತು ಅನ್ಯಥಾ ಅಲ್ಲ. ತಾಪತ್ರಯಗಳು ಯಾವಾಗಲೂ ಇರುವವೆ! ಅವು ಪ್ರತ್ಯಕ್ಷ ಪರೋಕ್ಷವಾಗಿ ಇದ್ದೇ ಇರುತ್ತವೆ. ಇದು ಖಂಡಿತ ಸತ್ಯವಾದ ಮಾತು. ಈ ವಿಷಯದಲ್ಲಿ ನಾನು ಇದುವರೆವಿಗೆ ಯೋಚನೆಯನ್ನೇ ಮಾಡಿಲ್ಲ; ಮುಂದೆ ಮಾಡುವುದೂ ಇಲ್ಲ. ದೊಡ್ಡ ದೊಡ್ಡ ಕೆಲಸಕ್ಕೆ ಕೈಹಾಕಿದರೂ ಆ ಕೆಲಸ ಆಗದಿದ್ದರೂ ವ್ಯಥೆಯಿಲ್ಲ: ಮಾಡಬೇಕಾದ ಕೆಲಸವನ್ನು ಆರಂಭಿಸಿಯೇ ಬಿಡುತ್ತೇನೆ, ಎಲ್ಲವೂ ದೈವೇಚ್ಛೆಯಿಂದ ನಡೆಯುತ್ತದೆ. ಎಲ್ಲಕ್ಕಿಂತಲೂ ಮಿಗಿಲಾಗಿ ನನ್ನ ಗುರುವಿನಲ್ಲಿ ಪರಿಮಿತ ನಂಬಿಕೆ. ಅವನು ಅದನ್ನು ಯಾವಾಗಲೂ ಕಾಪಾಡುತ್ತಾನೆ. ಅಣುರೇಣು ತೃಣಕಾಷ್ಟಗಳ ಚಲನವಲನಗಳೂ ಅವನ ಸಂಕಲ್ಪ ಎಷ್ಟೋ ಉದಾಹರಣೆಗಳಿವೆ. ಮತ್ತೆ ಕೊನೆಯದಾಗಿ ಎಲ್ಲವೂ ಗುರುಕೃಪೆಯಿಂದ ಒಳ್ಳೆಯದಕ್ಕೆ ಆಗುತ್ತೆ"*

ತಮ್ಮ ಅಪಾರ ಕಾರ್ಯಭಾರಗಳ ನಡುವೆ ಶಿಷ್ಯನೋರ್ವನ ಉದ್ಧಾರವನ್ನೂ ಜಪಿಸುತ್ತಿದ್ದ ಪೂಜ್ಯರ ವ್ಯಕ್ತಿತ್ವ ಎಂತಹ ವ್ಯಮಸದೃಶವಾದುದು ಎನ್ನುವುದು ತಿಳಿದುಬರುತ್ತದೆ. ಪೂಜ್ಯರ ಪಟ್ಟಾಧಿಕಾರದ ಸುವರ್ಣ ಮಹೋತ್ಸವದಲ್ಲಿ ಭಕ್ತರು ಅರ್ಪಿಸಿದ "ಅರ್ಚನಾ" ಅಭಿವಂದನ ಸಂಪುಟದ ಪುಟಪುಟದಲ್ಲಿಯೂ ಗಣ್ಯರ, ಭಕ್ತ ಸಮುದಾಯದ, ವಿದ್ಯಾರ್ಥಿಗಳ ಸಮರ್ಪಣಾ ಭಾವ ಹೆಪ್ಪುಗಟ್ಟಿರುವುದನ್ನು ಕಾಣಬಹುದು.

●

ನಂ. ೬೩೫, 'ಮಹಾಮನೆ', ಆಶ್ರಮ ರಸ್ತೆ, ಹಿನಕಲ್, ಮೈಸೂರು – ೫೭೦ ೦೧೭
೯೮೮೬೬ ೮೮೨೫೫







ತುಮಕೂರು: ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿರವರ ಸಂಸ್ಮರಣೆ, ದಿನಾಂಕ: ೦೨.೦೭.೨೦೨೦
ವೇದಿಕೆಯಲ್ಲಿ: ಡಾ. ಎಂ ಗೋವಿಂದರಾಯ, ಎಸ್ ಕುಮಾರಸ್ವಾಮಿ, ಮಹದೇವಮ್ಮ, ಎಂ.ಜಿ. ಸಿದ್ದರಾಮಯ್ಯ



ಚನ್ನಗಿರಿ: ಮಾದಾಪುರದ ತಿಪ್ಪಪ್ಪ ಮತ್ತು ದಿ. ಚಂದ್ರಮ್ಮ ದತ್ತಿ, ಲಿಂ. ಲಕ್ಕೋಳ್ ಬಸಪ್ಪ ಗಂಗಮ್ಮ ದತ್ತಿ ಮತ್ತು ಗರಗದ ಹಂಚಿನಮನೆ ಬಸಪ್ಪ ದತ್ತಿ ಉಪನ್ಯಾಸ ಕಾರ್ಯಕ್ರಮಗಳು ದಿನಾಂಕ: ೩೧.೦೧.೨೦೨೦
ವೇದಿಕೆಯಲ್ಲಿ: ಎಂ.ಟಿ. ತಿಮ್ಮಪ್ಪ, ಓ.ಎಸ್. ನಾಗರಾಜ್, ಸಿದ್ದಪ್ಪ, ಚಿಕ್ಕೋಳ್ ಈಶ್ವರಪ್ಪ, ಎಸ್. ಶಂಕರಪ್ಪ, ಮಹೇಶ್ವರಪ್ಪ, ಜಕ್ಕಲಿ ಶಿವಮೂರ್ತಿ




ಮುದ್ದೇಬಿಹಾಳ: ಫ.ಗು. ಹಳಕಟ್ಟಿಯವರ ಜಯಂತ್ಯೋತ್ಸವ, ದಿನಾಂಕ: ೦೨.೦೭.೨೦೨೦
ವೇದಿಕೆಯಲ್ಲಿ: ಸಿ.ಜಿ.ನಾಗರಾಳ, ಎಸ್.ಜಿ. ನಂದಿ, ಬಸವರಾಜ ನಾಲತ್ವಾಡ, ಎಸ್.ಬಿ. ಬಂಗಾರಿ



ಮೈಸೂರು ಗ್ರಾಮಾಂತರ: ವಚನ ಪಿತಾಮಹ ಡಾ.ಫ.ಗು.ಹಳಕಟ್ಟಿ ೧೪೦ ನೇ ಜನ್ಮದಿನ ಸಮಾರಂಭ, ದಿನಾಂಕ:೦೨.೦೭.೨೦೨೦ ಚಿತ್ರದಲ್ಲಿ: ಪ್ರೊ. ಮೊರಬದ ಮಲ್ಲಿಕಾರ್ಜುನ, ಎಂ ಚಂದ್ರಶೇಖರ್, ಮೂಗೂರು ನಂಜುಂಡಸ್ವಾಮಿ, ಹೆಳವರಹುಂಡಿ ಸಿದ್ದಪ್ಪ, ಕೆ. ಎಸ್. ಶಿವರಾಮು, ಸುರೇಶ್ ಬಾಬು, ವಿಕ್ರಮ್ ಅಯ್ಯಂಗಾರ್, ಬಸವರಾಜು(ಬಸಪ್ಪ), ರಂಗನಾಥ್ ಸಿ., ಮಧುಕುಮಾರ್, ವಸಂತಕುಮಾರಯ್ಯ, ಸಿದ್ದಲಿಂಗಪ್ಪ, ಶಿವಕುಮಾರ್, ಮೋಹನ್




ಬೀದರ: ಜಿ.ಎಸ್. ಶಿವಮಠ್ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೦೪.೦೩.೨೦೨೦ ಸಾನ್ನಿಧ್ಯ: ಗುರುಬಸವ ಪಟ್ಟದ್ದೇವರು ಸ್ವಾಮೀಜಿಗಳು, ವೇದಿಕೆಯಲ್ಲಿ: ಶಂಭುಲಿಂಗ ಕಾಮಣ್ಣ, ಸಂತೋಷ ಪಾಟೀಲ, ಜಿ.ಎಸ್. ಶಿವಮಠ್, ಸಂತೋಷ ಹಡಪದ, ಕಲ್ಲಪ್ಪ ಹೂಗಾರ

## ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು

### ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ ಜನ್ಮದಿನಾಚರಣೆ ಆನ್‌ಲೈನ್ ಕಾರ್ಯಕ್ರಮ

ದಿನಾಂಕ: ೦೨.೦೭.೨೦೨೦ ಚಿತ್ರದಲ್ಲಿ: ಶ್ರೀ ಗೊ.ರು. ಚನ್ನಬಸಪ್ಪ, ಶ್ರೀ ಅಪ್ಪಾರಾವ ಅಕ್ಕೋಣಿ, ಶ್ರೀ ಕೆ.ವಿ. ನಾಗರಾಜಮೂರ್ತಿ, ಶ್ರೀ ಹರ್ಷಗೌಡ ಪಾಟೀಲ್

## ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು

### ಕಾರ್ಯಕಾರಿ ಸಮಿತಿ ಸಭೆ (ಆನ್‌ಲೈನ್)

ದಿನಾಂಕ: ೦೪.೦೭.೨೦೨೦ ಚಿತ್ರದಲ್ಲಿ: ಶ್ರೀ ಅಪ್ಪರಾವ ಅಕ್ಕೋಣಿ, ಶ್ರೀ ಗೊ.ರು. ಚನ್ನಬಸಪ್ಪ, ಶ್ರೀ ಕೆ.ವಿ. ನಾಗರಾಜಮೂರ್ತಿ, ಶ್ರೀ ರವೀಶ್ ಕ್ಯಾತನಬೀಡು, ಶ್ರೀಮತಿ ಸುಶೀಲಾ ಸೋಮಶೇಖರ್ ದಂಪತಿಗಳು, ಶ್ರೀ ಎಸ್. ಮಹೇಶ್, ಶ್ರೀ ಪರಮೇಶ್ವರಗೌಡ ಶಿ. ಎರೇಸೀಮಿ

Magazine Registration No. RNI 68294/97
"REGISTERED" Postal Registration No. RNP/KA/BGS-167/2018-2020
Licensed to post without Pre Payment, License No. WPP-119

Posted at Registered News Paper Mailing Center, Bangalore P.S.O. Mysore Road-560 026 on 5th of every Month

MAHAAMANE Monthly Magazine Total Pages 68 (Include Cover Pages) Date of Publication 1 August 2020

# ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು

## ಸಮಾಜವಾದಿ ಚಿಂತಕ ಶ್ರೀ ಎಂ.ಪಿ. ಪ್ರಕಾಶ್ ಅವರ ಹುಟ್ಟುಹಬ್ಬ ಮತ್ತು ದತ್ತಿ ಉಪನ್ಯಾಸ




ದಿನಾಂಕ: ೧೧.೦೭.೨೦೨೦ ಚಿತ್ರದಲ್ಲಿ: ಶ್ರೀ ಗೊ.ರು. ಚನ್ನಬಸಪ್ಪ, ಡಾ. ಸಿ. ಸೋಮಶೇಖರ್, ಶ್ರೀ ಸುಧೀಂದ್ರ ಬದೋರಿಯ, ಶ್ರೀ ಕೆ.ವಿ. ನಾಗರಾಜಮೂರ್ತಿ, ಡಾ. ಬಿ.ಎಲ್. ಶಂಕರ್ ಶ್ರೀ ಸಂಗಮೇಶ ಗೌಡರ್, ಡಾ. ಸಿಂ.ರಾ. ಹೊನ್ನಲಿಂಗಯ್ಯ, ದಯಾನಂದ ಪಾಟೀಲ್

Published by: Go.Ru. Channabasappa, Akhila Bharatha Sharana Sahitya Parishat (Regd.)
Jagadguru Sri Shivarathrishwara Circle, 1st Main, 8th Block, Jayanagar, Bengaluru - 560 070
Printed at : Sathyasri Printers Pvt Ltd., No. 16/1, 3rd Cross, 2nd Main, Kasturiba Nagar, Bengaluru-560 026
Editor : Dr. M.S. Ashadevi